# ಯಯಾತಿ ಕಾದಂಬರಿ: ಒಂದು ವಿಶ್ಲೇಷಣೆ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರೌಢಪ್ರಬಂಧ

ಸಂಶೋಧಕರು

ಲತಾ ಕೆ.ಇ.



ಮಾರ್ಗದರ್ಶಕರು

ಬಿ.ಎಂ. ಪುಟ್ಟಯ್ಯ

ಸಹ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೪

# ಯಯಾತಿ ಕಾದಂಬರಿ: ಒಂದು ವಿಶ್ಲೇಷಣೆ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರೌಢಪ್ರಬಂಧ

ಸಂಶೋಧಕರು

**ಲತಾ ಕೆ.ಇ.**

ಮಾರ್ಗದರ್ಶಕರು

**ಡಾ. ಬಿ.ಎಂ. ಪುಟ್ಟಯ್ಯ**

ಸಹ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೪

## ಮಾರ್ಗದರ್ಶಕರ ಪ್ರಮಾಣ ಪತ್ರ

**'ಯಯಾತಿ ಕಾದಂಬರಿ: ಒಂದು ವಿಶ್ಲೇಷಣೆ'** ಎಂಬ ಪ್ರೌಢ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಲತಾ ಕೆ.ಇ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರೌಢಪ್ರಬಂಧವು ಮೂಲವಾಗಿದ್ದು, ಈ ಮೊದಲು ಇದನ್ನು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಬಿ.ಎಂ. ಪುಟ್ಟಯ್ಯ**
ಮಾರ್ಗದರ್ಶಕರು ಹಾಗೂ ಮುಖ್ಯಸ್ಥರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 16/06/2014

## ಘೋಷಣಾ ಪತ್ರ

**'ಯಯಾತಿ ಕಾದಂಬರಿ: ಒಂದು ವಿಶ್ಲೇಷಣೆ'** ಎಂಬ ಪ್ರೌಢ ಪ್ರಬಂಧವನ್ನು **ಡಾ. ಬಿ.ಎಂ. ಪುಟ್ಟಯ್ಯ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ಪ್ರೌಢಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟವಾಗಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಲತಾ ಕೆ. ಇ.
ಸಂಶೋಧಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ:

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನ

ಮರಾಠಿಯ ಪ್ರಸಿದ್ಧ ಲೇಖಕರಾದ ವಿ.ಎಸ್. ಖಾಂಡೇಕರ್ ಅವರ ಪ್ರಸಿದ್ಧ ಕಾದಂಬರಿ 'ಯಯಾತಿ' ಕೃತಿಯನ್ನು ಈ ಸಂಪ್ರಬಂಧಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಇದನ್ನು ವಿ.ಎಂ. ಇನಾಂದಾರ್ ಅವರು ಕನ್ನಡಕ್ಕೆ ಅತ್ಯಂತ ಸೊಗಸಾಗಿ ಅನುವಾದ ಮಾಡಿದ್ದಾರೆ. ಈಗ ಅಂದರೆ ೨೦೦೦ರಲ್ಲಿ ಈ ಕಾದಂಬರಿ ಕನ್ನಡದಲ್ಲಿ ಮರುಮುದ್ರಣ ಕಂಡಿದೆ. ಈ ಕಾದಂಬರಿಯು ಮರಾಠಿಯಿಂದ ಕನ್ನಡಕ್ಕೆ ಬಂದಿದ್ದರೂ ಕೂಡ ಇದು ಅನ್ಯ ಭಾಷೆಯ ಕಾದಂಬರಿ ಎಂದು ಕನ್ನಡದ ಯಾವ ಓದುಗರಿಗೂ ಅನಿಸಿಯೇ ಇಲ್ಲ. ಈ ಕಾದಂಬರಿಯು ಕನ್ನಡ ಕಾದಂಬರಿಗಳ ಕುಟುಂಬದಲ್ಲಿ ಹುಟ್ಟಿಬೆಳೆದಂತೆಯೇ ಅನಿಸಿದೆ. ಹಾಗಾಗಿ ಇದು ಕನ್ನಡ ಕಾದಂಬರಿ ಕುಟುಂಬದ ಖಾಯಂ ಸದಸ್ಯ ಎನಿಸಿಕೊಂಡಿದೆ. ಕನ್ನಡದ ಗಂಭೀರವಾದ ಕಾದಂಬರಿಗಳನ್ನು ಹೆಸರಿಸುತ್ತಾ ಬಂದರೆ, ಅಥವಾ ಕನ್ನಡದಲ್ಲಿ ಹೆಚ್ಚು ಓದುಗರ ಗಮನವನ್ನು ಸೆಳೆದಿರುವ ಕಾದಂಬರಿಗಳ ಹೆಸರುಗಳನ್ನು ಹೇಳುತ್ತಾ ಬಂದರೆ ಆ ಸಾಲಿನಲ್ಲಿ 'ಯಯಾತಿ' ಕಾದಂಬರಿಯು ಯಾವ ರಿಯಾಯಿತಿಯೂ ಇಲ್ಲದೆ ಅಗ್ರಸ್ಥಾನದಲ್ಲಿ ನಿಲ್ಲುತ್ತದೆ. ಅಷ್ಟರಮಟ್ಟಿಗೆ ಇದರ ಪ್ರಭಾವ ಕನ್ನಡ ಓದುಗರ ಮೇಲೆ ಆಗಿದೆ.

ಕೆಲವು ವಿಶ್ವವಿದ್ಯಾನಿಲಯಗಳ ಪಠ್ಯಕ್ರಮದ ಭಾಗವಾಗಿ ಈ ಕಾದಂಬರಿ ವಿದ್ಯಾರ್ಥಿ ಸಮೂಹದಿಂದಲೂ ಓದಿನ ವ್ಯಾಪ್ತಿಯನ್ನು ಪಡೆದಿದೆ. ಕಾದಂಬರಿಯನ್ನು ಓದಲು ಕೈಗೆತ್ತಿಕೊಂಡರೆ, ದೈಹಿಕ ಅಗತ್ಯಗಳನ್ನು ಬದಿಗೊತ್ತಿ ಕಾದಂಬರಿಯನ್ನು ಓದುವ ತೀವ್ರತೆ ಎಂತಹ ಓದುಗರಲ್ಲೂ ಕೂಡ ಕ್ರಿಯಾಶೀಲವಾಗುತ್ತದೆ. ಆ ಬಗೆಯಲ್ಲಿ ಯಯಾತಿ ಕಾದಂಬರಿಗೆ ಓದುಗರನ್ನು ಹಿಡಿದಿಟ್ಟುಕೊಳ್ಳುವ ಗುಣವಿದೆ. ಇದು ಇಲ್ಲಿಯ ಭಾಷಿಕ ನಿರೂಪಣೆ, ನಾಟಕೀಯವಾದ ಸಂಭಾಷಣೆಯ ಶೈಲಿ, ಅತ್ಯಂತ ಪರಿಣಾಮಕಾರಿಯಾದ ಚಿತ್ರಕ ಶಕ್ತಿ, ಒಂದು ಹಂತದಿಂದ ಮತ್ತೊಂದು ಹಂತಕ್ಕೆ ಮಹತ್ವದ ತಿರುವು ಪಡೆಯುತ್ತಾ, ಕುತೂಹಲವನ್ನು ಹುಟ್ಟಿಸುತ್ತಾ ಸಾಗುವ ಇದರ ಸನ್ನಿವೇಶ ನಿರ್ಮಾಣಗಳ

ಪರಿ ವಿಶಿಷ್ಟವಾದುದು. ಕಥೆಯು ದೇವಲೋಕದಿಂದ ದಾನವರ ಲೋಕಕ್ಕೂ, ದಾನವರ ಲೋಕದಿಂದ ಹಸ್ತಿನಾಪುರಕ್ಕೂ ಸುತ್ತಾಡುತ್ತದೆ. ಒಂದು ಕಡೆ ಅತ್ಯಂತ ಕುತೂಹಲಕಾರಿಯಾದ ಕಾದಂಬರಿಯ ವಸ್ತು, ಮತ್ತೊಂದು ಕಡೆ ನಮ್ಮ ಕಣ್ಣ ಮುಂದೆಯೇ ತಮ್ಮೆಲ್ಲ ಸಂತಸ, ನೆಮ್ಮದಿ, ಸುಖ, ವೈಭೋಗ, ಸಮಸ್ಯೆ, ಸಂಕಟ, ಸಿಟ್ಟು, ಆಕ್ರೋಶ, ದ್ವೇಷ, ಅಸೂಯೆ, ತಿರಸ್ಕಾರ, ಪ್ರತೀಕಾರಗಳೊಂದಿಗೆ ಸುಳಿದಾಡುವ ವಿವಿಧ ಪಾತ್ರಗಳು; ಆ ಒಂದೊಂದು ಪಾತ್ರಗಳ ವಿವಿಧ ನಮೂನೆಯ ಭಾವಜಗತ್ತುಗಳು, ಮಾನಸಿಕ ತೊಳಲಾಟಗಳು ಇಂತಹ ಹಲವು ಅನುಭವಗಳು ಓದುಗರನ್ನು ಆಕರ್ಷಿಸುತ್ತವೆ; ದಂಗುಬಡಿಸುತ್ತವೆ.

ಕಾದಂಬರಿಯ ವಸ್ತು ಮೂಲತಃ ಮಹಾಭಾರತದ ಒಂದು ಆಖ್ಯಾನ. ಆದರೆ ಆ ಒಂದು ಆಖ್ಯಾನವೇ ಇಡಿಯಾಗಿ ಒಂದು ಕಾದಂಬರಿಯಾಗಿ ರೂಪಿತವಾಗಿರುವುದು ವಿ.ಎಸ್. ಖಾಂಡೇಕರ್ ಅವರ ಸೃಜನಶೀಲ ಪ್ರತಿಭೆಗೆ ಅತ್ಯಂತ ಮೇರುಸಾಕ್ಷಿಯಾಗಿದೆ. ಕಾದಂಬರಿಯ ಯಾವ ಸನ್ನಿವೇಶವೂ ನಮಗೆ ನಮ್ಮಿಂದ ದೂರದಲ್ಲಿರುವಂತಹದ್ದು ಎಂದು ಅನಿಸುವುದೇ ಇಲ್ಲ. ಅದು ಅರಮನೆಯ ಒಳಗಿನ ವಿವರವೇ ಇರಲಿ, ಅರಮನೆಯಿಂದ ಹೊರಗಡೆ ನಡೆಯುವ ವಿವಿಧ ಚಟುವಟಿಕೆಗಳೇ ಇರಲಿ, ಯತಿ ವಾಸ ಮಾಡುತ್ತಿರುವ ದಟ್ಟಾರಣ್ಯವೇ ಇರಲಿ, ಯಯಾತಿ ಅತೀವವಾದ ವಿರಹವೇದನೆಯಿಂದ ಬಳಲುತ್ತಿರುವ ಅಶೋಕ ವನವೇ ಆಗಿರಲಿ, ಅರಮನೆಯಿಂದ ಹೊರದೂಡಲ್ಪಟ್ಟ ಶರ್ಮಿಷ್ಠೆ ಪರದಾಡುವ ಕ್ರೂರ ಪರಿಸ್ಥಿತಿಯಾಗಲಿ, ಶರ್ಮಿಷ್ಠೆಯನ್ನು ಹಿಡಿದುಕೊಟ್ಟರೆ ಬಹುಮಾನದ ಹಣವನ್ನು ಪಡೆಯಬಹುದೆಂಬ ಗಂಡ ಹೆಂಡತಿಯರ ಮಾತಾಗಲಿ, ಈ ಯಾವುವೂ ಕೂಡ ನಮ್ಮ ವರ್ತಮಾನದಿಂದ ಹೊರಗಿವೆ ಎನಿಸುವುದಿಲ್ಲ. ಕಾದಂಬರಿಯ ಪ್ರತಿಯೊಂದು ಸನ್ನಿವೇಶಗಳೂ, ಅಲ್ಲಿಯ ಒಂದೊಂದು ಭಾವಲೋಕವೂ ಓದುಗರಾದ ನಮ್ಮವೂ ಆಗುತ್ತವೆ. ಶುಕ್ರಾಚಾರಿ ಸಿಟ್ಟಿನಿಂದ ಕೊಡುವ ಶಾಪವಾಗಲಿ, ಯಯಾತಿ ಮತ್ತು ದೇವಯಾನಿಯರು ಮಾಡುವ ಜಗಳವಾಗಲಿ, ಶರ್ಮಿಷ್ಠೆಯ ಮೇಲಿನ ದೇವಯಾನಿಯ ಕ್ರೂರ ಹಠವಾಗಲಿ, ತಂದೆಯಾದ ಶುಕ್ರಾಚಾರಿಯ ಮೇಲಿನ ದೇವಯಾನಿಯ ಅತೀವ ಮಮತೆಯಾಗಲಿ, ಶರ್ಮಿಷ್ಠೆಯನ್ನು ಕಾಡಿಗೆ ಕರೆದುಕೊಂಡು ಹೋಗುವ ಮಾಧವನ ನಿಷ್ಠೆಯಾಗಲಿ ಈ ಎಲ್ಲ ಭಾವಗಳು ನಮ್ಮವೂ ಆಗುತ್ತವೆ.

ಪುಟಗಳ ವ್ಯಾಪ್ತಿಯ ದೃಷ್ಟಿಯಿಂದ ಕಾದಂಬರಿ ದೊಡ್ಡದೇ. ಆದರೆ ಅದರಲ್ಲಿ ಅರಳಿ ನಿಂತು, ಓದುಗರ ಮನಸೂರೆಗೊಳ್ಳುವ ಪಾತ್ರಗಳು ಬಹಳ ಕಡಿಮೆ ಪ್ರಮಾಣದವು. ಈ ಮಾತನ್ನು ಹೇಳುವಾಗ ಕನ್ನಡದ ಮುಖ್ಯ ಕಾದಂಬರಿಗಳಾದ 'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡಿತಿ', 'ಗ್ರಾಮಾಯಣ' ಮುಂತಾದ ಕಾದಂಬರಿಗಳ ಪಾತ್ರ ಜಗತ್ತನ್ನು ನೆನಪು ಮಾಡಿಕೊಳ್ಳಬೇಕು. ಈ ಕಾದಂಬರಿಗಳಲ್ಲಿ ಪಾತ್ರಗಳು ಕಿಕ್ಕಿರಿದಿವೆ. ಕೆಲವು ಪಾತ್ರಗಳನ್ನಂತು ನೆನಪಿಟ್ಟುಕೊಳ್ಳುವುದೇ ಕಷ್ಟ

ಎನಿಸುವಂತಹ ಪರಿಸ್ಥಿತಿ ಓದುಗರಿಗೆ ಎದುರಾಗುತ್ತದೆ. ಆದರೆ ಪ್ರಸ್ತುತ 'ಯಯಾತಿ' ಕಾದಂಬರಿಯಲ್ಲಿ ಆ ಬಗೆಯ ಪಾತ್ರಗಳ ಬಾಹುಳ್ಯಕ್ಕೆ ಸಂಬಂಧಿಸಿದಂತಹ ಸಂಕೀರ್ಣತೆ ಇಲ್ಲ.

ಇಡೀ ಕಾದಂಬರಿ ನಡೆದುಹೋದ ಘಟನೆಗಳನ್ನು ಮತ್ತೆ ನೆನಪು ಮಾಡಿಕೊಳ್ಳುವ ಸ್ವರೂಪದಲ್ಲೆ ಆರಂಭವಾಗುತ್ತದೆ ಹಾಗೂ ಇದೇ ಸ್ವರೂಪದಲ್ಲಿ ಮುಂದುವರಿಯುತ್ತದೆ. ಕಾದಂಬರಿಯ ಮೊದಲನೇ ಸಾಲೇ ಯಯಾತಿಯು ತನ್ನ ಕಥೆಯನ್ನು ಏತಕ್ಕಾಗಿ ಹೇಳಿಕೊಳ್ಳುತ್ತಿದ್ದೇನೆ ಎಂಬ ಸ್ವರೂಪದಲ್ಲಿ ಆರಂಭವಾಗುತ್ತದೆ. 'ನಾನೊಬ್ಬ ಅರಸನೆ? ಅಲ್ಲ, ಇದ್ದೆ'. ಅಂದರೆ ಯಯಾತಿಯು ತಾನು ಅರಸನಾಗಿದ್ದಾಗಿನ ಕಥೆಯನ್ನು ಬಿಡಿಬಿಡಿಸಿ ಹೇಳುವುದರ ಮೂಲಕ ಇದರ ಹಂದರ ಬಿಚ್ಚಿಕೊಳ್ಳುತ್ತದೆ. ಕಾದಂಬರಿಯ ಪ್ರತಿಯೊಂದು ಪಾತ್ರಗಳೂ ಕೂಡ ತಮ್ಮ ಕಥೆಯನ್ನು ತಾವೇ ಹೇಳಿಕೊಳ್ಳುತ್ತವೆ. ಹೀಗೆ ತಮ್ಮ ಬಗ್ಗೆ ತಾವು ಹೇಳಿಕೊಳ್ಳುತ್ತಲೆ ತಮ್ಮ ಸುತ್ತಲೂ ಬೆರೆಯುವ ಮತ್ತು ಬೇರೆಯಾಗುವ ಪಾತ್ರಗಳ ಸಂಬಂಧದ ಆವರಣವನ್ನು ಅನಾಯಾಸವಾಗಿ ಅನಾವರಣ ಮಾಡುತ್ತವೆ. ಹಾಗೆ ನೋಡಿದರೆ ಇಡೀ ಕಾದಂಬರಿಯಲ್ಲಿ ನಿರೂಪಕ ಸಂಪೂರ್ಣ ಹಿನ್ನೆಲೆಗೆ ಸರಿದಿದ್ದಾನೆ. ಇಡೀ ಕಾದಂಬರಿಯ ಪುಟಪುಟಗಳನ್ನು ಆಯಾ ಪಾತ್ರಗಳ ಬಾಯಿಯಲ್ಲೆ ನಿರೂಪಿಸುವ ವಿನೂತನವೂ, ವಿಶಿಷ್ಟವೂ ಆದ ನಿರೂಪಣಾ ವಿಧಾನವನ್ನು ಈ ಕಾದಂಬರಿ ಒಳಗೊಂಡಿದೆ. ಈ ಬಗೆಯ ನಿರೂಪಣೆಯ ಕ್ರಮವು ಓದುಗರೊಂದಿಗೆ ಆಯಾ ಪಾತ್ರಗಳು ನೇರವಾಗಿ ತಮ್ಮನ್ನು ತಾವು ನಿವೇದಿಸಿಕೊಂಡಂತೆ ಭಾಸವಾಗುತ್ತದೆ. ಕೆಲವು ಭಾಗಗಳಲ್ಲಿ ಮಾತ್ರವೇ ನಿರೂಪಕ ಬರುತ್ತಾನೆ. ಉಳಿದಂತೆ ಇಡೀ ಕಾದಂಬರಿ ಪಾತ್ರಗಳ ಮೂಲಕೇ ಬಿಚ್ಚಿಕೊಳ್ಳುತ್ತಾ ಸಾಗುತ್ತದೆ.

ಕಾದಂಬರಿಯ ವಸ್ತು ಜಗತ್ತಿನ ಆಧಾರದ ಮೇಲೆ, ಕಾದಂಬರಿಯೊಳಗಿನ ಪಾತ್ರಗಳ ಹೆಸರುಗಳ ಆಧಾರದ ಮೇಲೆ ಈ ಕಾದಂಬರಿ ಪುರಾಣದ್ದು ಎನಿಸಬಹುದು. ಆದರೆ ಇಡಿಯಾಗಿ ಒಂದೊಂದು ಪಾತ್ರದ ಬೆಳವಣಿಗೆಯ ಸನ್ನಿವೇಶದಲ್ಲಿ, ಪ್ರತಿಯೊಂದು ಪಾತ್ರವೂ ತನ್ನ ಸುಖ, ವೈಭವ, ಲೋಲುಪತೆ, ಅಸಹನೆ, ವಿಷಾದ, ಹತಾಶೆ, ದುಃಖ, ನೋವು, ನಲಿವು, ಸಿಟ್ಟು, ಸೆಡವು, ಸೇಡು, ದ್ವೇಷ, ಆಕ್ರೋಶ ಮುಂತಾದುವನ್ನು ಯಾವ ಮುಚ್ಚುಮರೆಯೂ ಇಲ್ಲದೆ ನಿರ್ಬಿಡೆಯಿಂದ ನಿರೂಪಿಸುವಾಗ ಆ ಇಡೀ ಜಗತ್ತು ನಾವು ಬದುಕುತ್ತಿರುವ ನಮ್ಮ ಸಮಕಾಲೀನ ಸಂದರ್ಭದ್ದು ಎನಿಸಿಬಿಡುತ್ತದೆ.

ಕಾದಂಬರಿಯು ಎಲ್ಲೆಲ್ಲಿಯೂ ತಾನು ಪೂರ್ವ ತೀರ್ಮಾನ ತೆಗೆದುಕೊಳ್ಳುವುದಿಲ್ಲ. ಎಲ್ಲಿಯೂ ಅತಿರೇಕಕ್ಕೆ ಹೋಗುವುದಿಲ್ಲ. ಯಾವ ಸನ್ನಿವೇಶವನ್ನೂ ಅತಿರೇಕಕ್ಕೆ ಹೋಗಿ ವೈಭವೀಕರಿಸುವುದಿಲ್ಲ. ತುಂಬಿದ ಹೊಳೆ ಅತ್ಯಂತ ಪ್ರಶಾಂತವಾಗಿ ಹರಿಯುವಂತೆ ಇದು ಅತ್ಯಂತ ಪ್ರಶಾಂತವಾಗಿ ಹರಿದಿದೆ. ಒಂದು ಪಾತ್ರವು ತನ್ನ ಕಥೆಯನ್ನು ಹೇಳಿಕೊಂಡ ನಂತರ ಮತ್ತೊಂದು ಪಾತ್ರವು ಕಾದಂಬರಿಯಲ್ಲಿ

ಎಂಟ್ರಿಯಾಗುತ್ತದೆ. ಹೀಗೆ ಕಾದಂಬರಿಯ ಪ್ರತಿಯೊಂದು ಭಾಗಗಳೂ ಕೂಡ ಆಯಾ ಪಾತ್ರಗಳ ಆತ್ಮಕಥೆಗಳಂತೆ ಓದುಗರಿಗೆ ಭಾಸವಾಗುತ್ತವೆ. ಈ ಬಗೆಯ ನಿರೂಪಣೆಯ ಕ್ರಮವೇ ಓದುಗರ ಹೃದಯನ್ನು ಅತ್ಯಂತ ಆಪ್ತವಾಗಿ ತಟ್ಟುತ್ತದೆ, ಮುಟ್ಟುತ್ತದೆ.

ಕಾದಂಬರಿಯು ಒಂದು ಕಡೆ ಯತಿ ಧರ್ಮವನ್ನೂ ಮತ್ತೊಂದು ಕಡೆ ರಾಜ ಧರ್ಮವನ್ನೂ ಬೆಸೆದು ನೋಡುವ ಅದೇ ಕಾಲಕ್ಕೆ ಅವನ್ನು ಬೇರ್ಪಡಿಸಿ ನೋಡುವ ಸ್ವರೂಪವನ್ನು ಸೃಷ್ಟಿಮಾಡಿದೆ. ಯತಿಯ ಮೂಲಕ ಯತಿಧರ್ಮವನ್ನೂ; ಯಯಾತಿಯ ಮೂಲಕ ರಾಜಧರ್ಮವನ್ನೂ ಬಿಚ್ಚಿಡುವ ಮತ್ತು ಪರಸ್ಪರ ಸಮರ್ಥಿಸುವ ವಿಧಾನ ಇಲ್ಲಿದೆ. ಅದೇ ಕಾಲಕ್ಕೆ ಯತಿ ಧರ್ಮದಲ್ಲಿ ನಿಂತು ರಾಜಧರ್ಮವನ್ನು ನಿರಾಕರಿಸುವ ಮತ್ತು ರಾಜಧರ್ಮದಲ್ಲಿ ನಿಂತು ಯತಿಧರ್ಮವನ್ನು ನಿರಾಕರಿಸುವ ಚೌಕಟ್ಟು ಇಲ್ಲಿಯದು. ಇದರ ಹಾಗೆಯೇ ಕಾದಂಬರಿ ಒಂದು ಕಡೆ 'ನೈತಿಕ ಪ್ರಧಾನವಲ್ಲದ' ಲೋಕದ ದೈಹಿಕ/ ಭೌತಿಕ ಸುಖವನ್ನೂ (ಯತಿಯ ತೀರಲಾಗದ ಭೋಗದ ಅಪೇಕ್ಷೆ); ಮತ್ತೊಂದು ಕಡೆ 'ನೈತಿಕ ಪ್ರಧಾನವಾದ' ಮಾನಸಿಕ ಆನಂದವನ್ನೂ ಬೆಸೆದು ನೋಡುವ ಮತ್ತು ಅದೇ ಕಾಲಕ್ಕೆ ಈ ಎರಡನ್ನೂ ಬೇರ್ಪಡಿಸಿ ನೋಡುವ ಅಸಾಮಾನ್ಯ ವಿಧಾನವನ್ನು ನಿರ್ಮಾಣ ಮಾಡಿದೆ. ಅರಮನೆಯ ಒಳಗಿನ ವೈಭವವನ್ನೂ ಹಾಗೂ ಅದರ ಹಿಂದಿರುವ ಟೊಳ್ಳುತನವನ್ನೂ ಅಥವಾ ಅದರ ಹಿಂದಿರುವ ಕಠೋರ ದುರಂತ ವಾಸ್ತವವನ್ನೂ ಬಿಡಿಬಿಡಿಯಾಗಿ ಬಿಚ್ಚುಡುವ ಕೆಲಸವನ್ನು ಈ ಕಾದಂಬರಿ ಮಾಡುತ್ತಾ ಹೋಗುತ್ತದೆ. ಋಷಿ ಮುನಿಗಳ ಅಹಂಕಾರವನ್ನೂ, ಅದರ ವಿವಿಧ ಬಗೆಯ ಪರಿಣಾಮಗಳನ್ನೂ ತೆರೆದುತೋರಿಸಲು ಕಾದಂಬರಿ ಆಸಕ್ತಿದಾಯಕವಾಗಿದೆ. ಅರಸರ ದೈಹಿಕ ದಾಹ, ತೀರದ ಕಾಮತೃಷೆ, ಕಠೋರತೆ, ಮಹಾರಾಣಿಯರ ಕಠಿಣ ಹೃದಯ, ದಾಸಿಯರ ಸೇವಾನಿಷ್ಠೆ, ಸಾಮಾನ್ಯರ ಬದುಕಿನ ವಿವಿಧ ಸಂಕಟಗಳು, ಸಮಸ್ಯೆಗಳು ಈ ಎಲ್ಲವನ್ನೂ ಒಂದರೊಳಗೊಂದನ್ನು ಅತ್ಯಂತ ಸಹಜವಾಗಿ ಮತ್ತು ಅಷ್ಟೇ ಸೂಕ್ಷ್ಮವಾಗಿ ಬೆರೆಸುತ್ತಾ, ಬೆಸೆಯುತ್ತಾ, ನಿರೂಪಿಸುತ್ತಾ ಸಾಗುತ್ತದೆ.

'ಯಯಾತಿ' ಕಾದಂಬರಿಯು ಒಂದು ಆಯಾಮದಲ್ಲಿ ಯತಿಧರ್ಮ ಹಾಗೂ ರಾಜಧರ್ಮವನ್ನು ಮುಖಾಮುಖಿ ಮಾಡಿದರೆ; ಮತ್ತೊಂದು ಆಯಾಮದಲ್ಲಿ ಇಡೀ ಮಾನವರ ಅಂತರಂಗ ಹಾಗೂ ಬಹಿರಂಗಗಳನ್ನು ಮುಖಾಮುಖಿ ಮಾಡುತ್ತದೆ. ಇದರ ಹಾಗೆಯೇ ಒಂದು ಆಯಾಮದಲ್ಲಿ ಇಡಿಯಾಗಿ ಪುರುಷ ಲೋಕದ ಒಳಹೊರಗನ್ನು ಮಹಿಳಾ ಲೋಕದ ಒಳಹೊರಗಿನ ಎದುರಿಗಿಟ್ಟು ಒಂದರಿಂದ ಮತ್ತೊಂದನ್ನು ಅರಿಯುವ ಹಾಗೂ ಅದನ್ನು ಬೆಲೆಗಟ್ಟುವ ಕೆಲಸವನ್ನೂ ಮಾಡುತ್ತದೆ. ದಾಸಿಯರ ಮೂಲಕ ರಾಜ ರಾಣಿಯರ ಅಂತರಂಗ ಹಾಗೂ ಬಹಿರಂಗಗಳನ್ನೂ;

ರಾಜ ರಾಣಿಯರ ಮೂಲಕ ದಾಸಿಯರ ಅಂತರಂಗ ಹಾಗೂ ಬಹಿರಂಗಗಳನ್ನೂ; ರಾಜಧರ್ಮದ ಮೂಲಕ ಯತಿಧರ್ಮವನ್ನೂ; ಯತಿಧರ್ಮದ ಮೂಲಕ ರಾಜಧರ್ಮವನ್ನೂ; ದೈಹಿಕ ಪ್ರಧಾನ ಸುಖದ ಮೂಲಕ ಮಾನಸಿಕ ಪ್ರಧಾನ ಆನಂದವನ್ನೂ; ಮಾನಸಿಕ ಪ್ರಧಾನ ಆನಂದದ ಮೂಲಕ ದೈಹಿಕ ಪ್ರಧಾನ ಸುಖವನ್ನೂ; ಜೊತೆಗೆ ಈ ಎಲ್ಲವುಗಳ ಆಳ ಅಗಲಗಳ ಚಲನಶೀಲ ಸಂಕೀರ್ಣಗಳನ್ನು ಶೋಧಿಸುವ ಕೆಲಸವನ್ನು 'ಯಯಾತಿ' ಕಾದಂಬರಿ ಅತ್ಯಂತ ಪರಿಣಾಮಕಾರಿಯಾಗಿ ಮಾಡುತ್ತಾ ಸಾಗಿದೆ. ಇಷ್ಟೆಲ್ಲಾ ಸಂಕೀರ್ಣ ಆಯಾಮಗಳನ್ನು ಒಳಗೊಂಡಿರುವ ಕಾದಂಬರಿಯನ್ನು ಕುರಿತು ಬಹು ಆಯಾಮಗಳಲ್ಲಿ ಅಧ್ಯಯನ ಮಾಡಲು ಸಾಧ್ಯವಿದೆ.

## ಅಧ್ಯಯನದ ಉದ್ದೇಶ

ಈ ಸಂಪ್ರಬಂಧದ ಉದ್ದೇಶಗಳನ್ನು ಈ ಮುಂದಿನಂತೆ ವಿವರಿಸಿಕೊಳ್ಳಬಹುದು. ಕಾದಂಬರಿಯ ವಸ್ತು ಪ್ರಾಚೀನ ಎಂತಲೊ, ಅಥವಾ ಇದು ಮಾಹಾಭಾರತದ ಒಂದು ಆಖ್ಯಾನದ ತುಣುಕು ಎಂತಲೋ ಅನಿಸಿದರೂ ಕೂಡ, ಇಡೀ ಕಾದಂಬರಿಯು ಇಡೀ ಮಾನವ ಕುಲದ ಅಂತರಂಗ ಹಾಗೂ ಬಹಿರಂಗದ ಕಥೆಯನ್ನು ನಿರೂಪಿಸುತ್ತಿದೆ. ಮಾನವ ಕುಲಕ್ಕೆ ದೈಹಿಕ ಪ್ರಧಾನ ಸುಖ ಮುಖ್ಯವೊ, ಮಾನಸಿಕ ಪ್ರಧಾನ ಆನಂದ ಮುಖ್ಯವೊ ಎಂಬ ಕಾದಂಬರಿಯ ಒಳ ಆಶಯವನ್ನು ಪರಿಶೀಲಿಸುವುದು.

ಕಾದಂಬರಿಯು ಬಿಚ್ಚಿಡುತ್ತಿರುವ ಮಹಿಳಾ ಲೋಕದ ಅಂತರಂಗ ಹಾಗೂ ಬಹಿರಂಗದ ಲೋಕವನ್ನು ಪರಿಶೀಲಿಸುವುದು ಹಾಗೂ ಅದನ್ನು ವರ್ತಮಾನದ ಬೆಳಕಿನಲ್ಲಿ ಮೌಲ್ಯಮಾಪನ ಮಾಡಲು ಪ್ರಯತ್ನಿಸುವುದು.

ಕಾದಂಬರಿಯು ನಿರೂಪಿಸಿರುವ ಹಲವು ಪಾತ್ರಗಳ ಸ್ವಭಾವಗಳನ್ನು ಅರಿಯಲು ಹಾಗೂ ಆ ಮೂಲಕ ಕಾದಂಬರಿಯ ರಚನೆಗೆ ಒದಗಿರುವ ಸಾಯವಯ ಸಂಬಂಧವನ್ನು ಪರಿಶೀಲಿಸುವುದು ಮತ್ತು ಆ ಕುರಿತು ನಿರ್ದಿಷ್ಟವಾಗಿ ಚರ್ಚೆ ಮಾಡುವುದು.

ಇಡೀ ಕಾದಂಬರಿಯು ಆಯಾ ಪಾತ್ರಗಳ ಆತ್ಮಕಥೆಗಳ ಸಂಕಲನದಂತೆ ಭಾಸವಾದರೂ ಕೂಡ ನಿರೂಪಣೆಯ ಭಾಗವಾಗಿ ಕೆಲವು ಸಾರ್ವತ್ರಿಕ ಎನ್ನಬಹುದಾದ ತತ್ವಗಳನ್ನು ನಿರೂಪಿಸುತ್ತಾ, ಪ್ರತಿಪಾದಿಸುತ್ತಾ ಬಂದಿದೆ. ಅವುಗಳನ್ನು ನೇರವಾಗಿ ಕಾದಂಬರಿಯ ಪುಟಗಳಿಂದಲೇ ಆರಿಸಿಕೊಂಡು ಆ ಬಗ್ಗೆ ನಿರ್ದಿಷ್ಟವಾದ ಚರ್ಚೆಯನ್ನು ನಡೆಸುವುದು.

## ಅಧ್ಯಯನದ ವ್ಯಾಪ್ತಿ

'ಯಯಾತಿ' ಕಾದಂಬರಿಯು ಕನ್ನಡದಲ್ಲಿ ಬಹಳ ವ್ಯಾಪಕವಾದ ಓದುಗರನ್ನು ಹೊಂದಿದೆ. ಕನ್ನಡದ ಮುಖ್ಯ ಕಾದಂಬರಿಗಳ ಸಾಲಿನಲ್ಲಿ ಇದೂ ಕೂಡ ಅಗ್ರಗಣ್ಯ ಸ್ಥಾನದಲ್ಲೆ ಇದೆ. ಇದು ಅತಿಶಯೋಕ್ತಿಯ ಮಾತಲ್ಲ. ಆದರೆ ಈ ಕಾದಂಬರಿಯನ್ನು ಕುರಿತು ಅಷ್ಟಾಗಿ ಸ್ವತಂತ್ರ ಅಧ್ಯಯನಗಳು ನಡೆದಂತೆ ಕಾಣುವುದಿಲ್ಲ. ಹಾಗೆ ನಡೆದಿರುವ ಕೆಲವು ಲೇಖನಗಳು ಸಾಂದರ್ಭಿಕವಾಗಿ ಬಂದಿವೆ. ಹಾಗಾಗಿ ಈ ಸಂಪ್ರಬಂಧಕ್ಕೆ ಮುಖ್ಯವಾಗಿ 'ಯಯಾತಿ' ಕಾದಂಬರಿಯನ್ನೆ ಅವಲಂಬಿಸಲಾಗಿದೆ. ಇನ್ನು ಉಳಿದಂತೆ ಇದನ್ನು ಕುರಿತು ಬಂದಿರುವ ಒಂದೆರಡು ಲೇಖನಗಳನ್ನು ಪೂರಕವಾಗಿ ತೆಗೆದುಕೊಳ್ಳಲಾಗಿದೆ.

## ಅಧ್ಯಯನದ ವಿಧಾನ

ಈ ಸಂಪ್ರಬಂಧವನ್ನು ಒಟ್ಟು ಏಳು ಅಧ್ಯಾಯಗಳಲ್ಲಿ ರೂಪಿಸಲಾಗಿದೆ. ಮೊದಲನೇ ಅಧ್ಯಾಯದಲ್ಲಿ ಸಂಪ್ರಬಂಧದ ಉದ್ದೇಶವನ್ನು ವಿವರಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಕಾದಂಬರಿಯ ವಸ್ತುವನ್ನು ಕುರಿತು ಮುಖ್ಯವಾದ ಕೆಲವು ಚರ್ಚೆ ಮಾಡಲಾಗಿದೆ. ಮೂರನೇ ಅಧ್ಯಾಯದಲ್ಲಿ ಕಾದಂಬರಿಯಲ್ಲಿ ಅನಾವರಣ ಆಗಿರುವ ಸಾಮಾನ್ಯ ವರ್ಗದ ಮಹಿಳಾ ಪಾತ್ರಗಳನ್ನು ಕುರಿತು ಚರ್ಚಿಸಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಕಾದಂಬರಿಯ ವಿವಿಧ ಪಾತ್ರಗಳ ಸ್ವಭಾವಗಳನ್ನು ಕುರಿತು ಚರ್ಚಿಸಲಾಗಿದೆ. ಐದನೇ ಅಧ್ಯಾಯದಲ್ಲಿ ಕಾದಂಬರಿಯು ಪ್ರಾಸಂಗಿಕವಾಗಿ ನಿರೂಪಿಸಿರುವ ಕೆಲವು ತತ್ವಗಳನ್ನು ಕುರಿತು ಚರ್ಚಿಸಲಾಗಿದೆ. ಆರನೇ ಅಧ್ಯಾಯದಲ್ಲಿ ಕಾದಂಬರಿಯ ಪಾತ್ರಗಳ ಮಾನಸಿಕ ಒಳತೋಟಿಯನ್ನು ಕುರಿತು ಚರ್ಚಿಸಲಾಗಿದೆ. ಏಳನೇ ಅಧ್ಯಾಯವು ಸಮಾರೋಪವನ್ನು ಒಳಗೊಂಡಿದೆ.

ಇದು ಒಂದು ಬಗೆಯಲ್ಲಿ ಅತ್ಯಂತ ಸ್ಥೂಲವಾಗಿ ಸಮಾಜಶಾಸ್ತ್ರೀಯವೆನ್ನಬಹುದಾದ ಅಧ್ಯಯನ ವಿಧಾನವನ್ನು ಒಳಗೊಂಡಿದೆ. ಹಾಗಾಗಿ ಕಾದಂಬರಿಯ ಯಾವುದೆ ಸನ್ನಿವೇಶದ ಚರ್ಚೆಯಿರಲಿ, ಯಾವುದೆ ಪಾತ್ರದ ಬಗೆಗಿನ ಚರ್ಚೆಯಿರಲಿ, ಅಲ್ಲಿ ನಮ್ಮ ಸಮಕಾಲೀನ ಸಮಾಜದ ಸಾಮಾನ್ಯ ಅರಿವಿನ ನೆಲೆಯಲ್ಲಿ ಚರ್ಚೆ ಮಾಡಲಾಗಿದೆ. ಇದು ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಈಗ ಚಾಲ್ತಿಯಲ್ಲಿರುವ ಒಂದು ಮುಖ್ಯ ಶಿಸ್ತಾಗಿದೆ.

# ಅಧ್ಯಾಯ ಎರಡು

## ಕಾದಂಬರಿಯ ವಸ್ತು ಜಗತ್ತು: ಕೆಲವು ಮಾತುಗಳು

'ಯಯಾತಿ' ಕಾದಂಬರಿಯ ಲೇಖಕರಾದ ವಿ.ಎಸ್. ಖಾಂಡೇಕರ ಅವರು ಈ ಕಾದಂಬರಿಯ ರಚನೆಯನ್ನು ಕುರಿತು ಈ ರೀತಿ ಹೇಳಿದ್ದಾರೆ. 'ನಲವತ್ತೆರಡರಿಂದ ಐವತ್ತೆರಡರವೆಗಿನ ದಶಕದಲ್ಲಿ ಪ್ರಪಂಚದಲ್ಲಿ ಮತ್ತು ನಮ್ಮ ದೇಶದಲ್ಲಿ ನಡೆದ ವಿಚಿತ್ರ ಪರಿವರ್ತನೆಯನ್ನು ಭೌತಿಕ ಪ್ರಗತಿ ಮತ್ತು ನೈತಿಕ ಅಧೋಗತಿ ಕೈಯಲ್ಲಿ ಕೈ ಸಿಕ್ಕಿಸಿಕೊಂಡು ನಗುನಗುತ್ತಾ, ಮುನ್ನಡೆಯುತ್ತಿದ್ದ ವಿಲಕ್ಷಣ ದೃಶ್ಯವನ್ನು ನಾನು ಕಂಡಿರದಿದ್ದರೆ ಈ ಕಾದಂಬರಿಯನ್ನು ನಾನು ಬರೆಯುತ್ತಿದ್ದೆನೊ ಇಲ್ಲವೊ ಹೇಳಲಾಗುವುದಿಲ್ಲ. ಯಯಾತಿ ಕಾದಂಬರಿಯು ಪುರಾಣ ವಸ್ತುವನ್ನು ಆಧರಿಸಿದ ಒಂದು ಸ್ವತಂತ್ರ ಕಾದಂಬರಿಯಾಗಿದೆ ಎಂದು ವಿ.ಎಸ್. ಖಾಂಡೇಕರ್ ಅವರೇ ಹೇಳಿಕೊಂಡಿದ್ದಾರೆ. ಇದು ಪುರಾಣದ ವಸ್ತುವಾದರೂ ಕೂಡ ಸಂಪೂರ್ಣವಾಗಿ ಪುರಾಣವನ್ನೇ ಆಧರಿಸಿ ಬರೆದಿಲ್ಲ. ಅದು ಪ್ರಸ್ತುತದಲ್ಲಿನ ವಾಸ್ತವಿಕತೆಯನ್ನು ನಿರೂಪಿಸುವ ಒಂದು ಪ್ರಮುಖವಾದ ಕಾದಂಬರಿಯಾಗಿ, ಮನುಷ್ಯನ ಆಸೆ, ತೃಪ್ತಿ, ಪ್ರೀತಿ, ಪ್ರೇಮ ಇವೆಲ್ಲವೂ ಇದರಲ್ಲಿ ಮೂಡಿದೆ. ಜೊತೆಗೆ ಇಂದು ಮಾನವ ಪ್ರಪಂಚದಲ್ಲಿ ನಡೆಯುತ್ತಿರುವ ಮತ್ತು ನಡೆದಿರುವ ಘಟನೆಗಳನ್ನು ಆಧರಿಸಿದೆ[೧].

ಈ ಕಾದಂಬರಿಯು ಯಯಾತಿ, ಶರ್ಮಿಷ್ಠೆ, ದೇವಯಾನಿಯರ ಕಥೆಯಾಗಿದ್ದರೂ ಕೂಡ ಅವರ ಕಥೆಯಲ್ಲಿ ಸಾಮಾನ್ಯ ಜನರ ಜೀವನದ ದರ್ಶನವನ್ನು ಖಾಂಡೇಕರ್ ಅವರು ಕಟ್ಟಿಕೊಟ್ಟಿದ್ದಾರೆ. ಅವರ ತಲ್ಲಣಗಳು, ಸಂಕಟ, ನೋವುಗಳು ಇವೆಲ್ಲವನ್ನೂ ಅತ್ಯಂತ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

ಮಗುವಿನ ಅಂತರಾಳದ ಇಚ್ಚೆ ಮತ್ತು ಶಕ್ತಿಗೆ ಅನುಗುಣವಾಗಿ ಬೆಳೆಯಲು ಬಿಡಬೇಕೆ ಹೊರತು ತಂದೆ, ತಾಯಿ ಅಥವಾ ಇನ್ಯಾರಾದರೋ ಆಸೆಯಂತೆ ಅಲ್ಲ. ಇಲ್ಲಿ ಯಯಾತಿಯು ಅವನಿಚ್ಚೆಯಂತೆ ಬೆಳೆಯಲಿಲ್ಲ ಹಾಗೂ ಬದುಕಲಿಲ್ಲ. 'ಅರಸನೊಬ್ಬನ ಹೊಟ್ಟೆಯಲ್ಲಿ ಹುಟ್ಟಿದೆ

ಎಂಬುದರಿಂದ ನಾನು ಅರಸನಾದೆ. ಅರಸನಾಗಿ ಬಾಳಿದೆ ಇದರಲ್ಲಿ ನನ್ನ ಗುಣವೂ ಇಲ್ಲ! ದೋಷವೂ ಇಲ್ಲ... ಹಸ್ತಿನಾಪುರದ ನಹುಷ ದೊರೆಯ ಹೊಟ್ಟೆಯಲ್ಲಿ ದೇವರು ನನಗೆ ಜನ್ಮವನ್ನು ದಯಪಾಲಿಸಿದ. ತಂದೆಯ ನಂತರ ನೇರವಾಗಿ ಪಟ್ಟಕ್ಕೆ ಬಂದೆ. ಇದರಲ್ಲಿ ಯಾವ ಹಿರಿತನ?, ಅರಮನೆಯ ಮೇಲಟ್ಟದ ಎತ್ತರದಲ್ಲಿ ಕುಳಿತಿರುವ ಕಾಗೆಯನ್ನು ಜನಗಳು ಕುತೂಹಲದಿಂದ ನೋಡುತ್ತಾರೆ'[3]. ಕೇವಲ ತಂದೆತಾಯಂದಿರ ಇಚ್ಚೆಯಂತೆ ಮಕ್ಕಳನ್ನು ಬೆಳೆಸಲು ಇಚ್ಚಿಸಿದಾಗ ಮಕ್ಕಳಲ್ಲಿನ ತನ್ನ ಆಸೆ, ಆಕಾಂಕ್ಷೆಗಳಿಗೆ ಯಾವ ಬೆಲೆಯೂ ಇರುವುದಿಲ್ಲ. ಇನ್ನೊಬ್ಬರ ಇಚ್ಚೆ ಆ ಮಗುವನ್ನು ಬಲಿಪಶುವಾಗಿಸಿ ಅವರು ಕೊನೆಯವರೆಗೂ ನಿರಾಶವಾದ ಜೀವನವನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಅದರ ಜೊತೆಗೆ ಜೀವನವನ್ನು ಸಾಗಿಸಬೇಕಾಗುತ್ತದೆ.

ಇದನ್ನು ವರ್ತಮಾನಕ್ಕೆ ಹೋಲಿಸಿ ಹೇಳುವುದಾದರೆ, ಇವತ್ತಿನ ಆಧುನಿಕ ಹಾಗೂ ಜಾಗತಿಕ ಸಂದರ್ಭದಲ್ಲಿ ಶಿಕ್ಷಣ ವ್ಯವಸ್ಥೆಯನ್ನು ತೆಗೆದುಕೊಂಡಾಗ ಇಂಗ್ಲಿಷ್ ವ್ಯಾಮೋಹದಿಂದಾಗಿ ಆಟ ಆಡುವ ವಯಸ್ಸಿನಲ್ಲೇ ಕಲಿಕೆ ಎಂಬ ಉರುಳಿನಿಂದ ಅವರಿಗೆ ಉಸಿರುಗಟ್ಟಿಸುತ್ತಿದ್ದೇವೆ. ಸ್ವಚ್ಛಂದವಾಗಿ ಪ್ರಕೃತಿಯಲ್ಲಿ ಬೆರೆತು ಆರೋಗ್ಯವಾಗಿ ಬೆಳೆಯಬೇಕಾಗಿದ್ದ ಮಗು ಇಂದು ಇಂಗ್ಲೀಷ್ ಶಿಕ್ಷಣದ ಪ್ರಭಾವದಿಂದಾಗಿ ಆ ಮಗು ತನ್ನ ಬಾಲ್ಯದ ದಿನಗಳನ್ನು ದುಃಖದ ಮಡುವಿನಲ್ಲೇ ಕಳೆಯುತ್ತಿರುವ ಸಂದರ್ಭವನ್ನು ಕಾಣುತ್ತೇವೆ.

ಯಯಾತಿಯು ಒಬ್ಬ ರಾಜನಾದರೂ ಸಹ ತನ್ನ ಇಚ್ಛೆಯಂತೆ ಆಸೆ, ಆಕಾಂಕ್ಷೆಗೆ ತಕ್ಕಂತೆ ಎಂದೂ ಕೂಡ ಜೀವನ ಸಾಗಿಸಲಲ್ಲಿ. ಬಾಲ್ಯದಲ್ಲಿ ತಾನು ಕವಿಯ ಮನಸ್ಸನ್ನು ಹೊಂದಿದ್ದರೂ ಸಹ ಎಲ್ಲಿಯೂ ಕೂಡ ಕವಿಯಾಗಿ ತನ್ನ ಆಸೆಯನ್ನು ತೋರಗೊಡಲು ಅವಕಾಶ ಸಿಗಲಿಲ್ಲ. ಹಾಗೆಯೇ ಸಾಂಪ್ರದಾಯಿಕವಾಗಿ ತನ್ನ ತಂದೆಯ ಆಸೆಯಂತೆ ರಾಜನಾಗುತ್ತಾನೆ. ತನ್ನಲ್ಲಿಯ ಕವಿಯ ಸಮಾಧಿಯ ಮೇಲೆ ರಾಜತ್ವವನ್ನು ಮೆರೆಯುತ್ತಾನೆ 'ಕವಿಯೇ? ಕವಿಯಾಗುವುದರಿಂದ ನಮ್ಮ ಯಯಾತಿಗೆ ಏನು ಸಿಕ್ಕಬೇಕಾಗಿದೆ? ಹೆಚ್ಚೆಂದರೆ ಪ್ರಪಂಚದಲ್ಲಿಯ ಸೌಂದರ್ಯವನ್ನು ಕವಿ ವರ್ಣಿಸಬಹುದು. ಆದರೆ ಆ ಸೌಂದರ್ಯವನ್ನು ಮನಸೋಕ್ತವಾಗಿ ಉಪಭೋಗ ಮಾಡುವವ ವೀರನಾಗಿದ್ದವ ಮಾತ್ರ, ನಮ್ಮ ಯಯು ವೀರನಾಗಬೇಕು... ಇಂದ್ರ ಪದವಿಯನ್ನು ಉಪಭೋಗಿಸಿದ ಆನಂದವನ್ನು ಪಡೆದಿದ್ದೇನೆ. ಈ ಪರಂಪರೆಯನ್ನು ನಮ್ಮ ಮಗು ಮುಂದುವರೆಸಿಕೊಂಡು ಹೋಗಬೇಕು'[4]

ಇಲ್ಲಿ ಹತ್ತಿಕ್ಕುವ ಮನಸ್ಥಿತಿ ಮತ್ತು ಅಧಿಕಾರವನ್ನು ಕಾಣುತ್ತೇವೆ. ಬೆಳೆಯುವ ಪ್ರತಿಭೆಯನ್ನು ಆರಂಭದಲ್ಲೇ ಚಿವುಟಿ ಹಾಕುತ್ತಿರುವುದು ತಿಳಿಯುತ್ತದೆ. ಒಬ್ಬ ಅರಸನೂ ಕೂಡ ಕವಿಯ ಮನಸ್ಥಿತಿ

ಹೊಂದುವುದು ಸಾಧ್ಯವೆಂಬುದನ್ನು ಇಲ್ಲಿ ಚಿತ್ರಿಸಲಾಗಿದೆ. ಇಲ್ಲಿ ಇನ್ನೊಂದು ಅಂಶವನ್ನು ಸಹ ನಾವು ಮುಖ್ಯವಾಗಿ ಗಮನಿಸಬಹುದು. ಅದೇನೆಂದರೆ ರಾಜಾಶ್ರಯದಲ್ಲಿದ್ದ ಕವಿಗಳು ರಾಜರನ್ನು ಹೊಗಳಿ ಸಾಹಿತ್ಯವನ್ನು ರಚನೆಮಾಡದಿದ್ದರೆ ಆ ರಾಜ್ಯದ ಪರಿಸ್ಥಿತಿ, ಅಲ್ಲಿನ ವಾಸ್ತವತೆ, ರಾಜನ, ವೀರನ ಪರಾಕ್ರಮ ಯಾವುದೂ ಸಹ ತಲೆ ತಲೆಮಾರುಗಳವರೆಗೆ ತಿಳಿಯಲು ಸಾಧ್ಯವಿರುತ್ತಿರಲಿಲ್ಲ. ಕೇವಲ ರಾಜರ ಆಳ್ವಿಕೆಯಲ್ಲಿ ಕವಿಗಳಿಲ್ಲದೆ ಇದ್ದಿದ್ದರೆ ಯಾವ ಅರಸನ ನೆನಪುಗಳು ಬಹುಶಃ ಇರುತ್ತಿರಲಿಲ್ಲವೇನೋ? ಹೀಗಾಗಿ ಕನ್ನಡದ ಪಂಪ, ರನ್ನ, ಪೊನ್ನ, ರಾಘವಾಂಕ ಇನ್ನೂ ಮುಂತಾದ ಪ್ರಸಿದ್ಧ ಕವಿಗಳು ಹಾಗೂ ಅವರ ಆಶ್ರಯದಾತರು ಅಜರಾಮರರಾಗಿದ್ದಾರೆ. ಆದರೆ ಇಲ್ಲಿ ಸ್ವಂತ ಇಚ್ಛೆಗೆ ಯಾವುದೇ ಅವಕಾಶವವಿಲ್ಲದಿರುವುದನ್ನು ಕಾಣುತ್ತೇವೆ.

ಗಾದೆ ಮಾತಿನಂತೆ 'ಅಪ್ಪ ಹಾಕಿದ ಆಲದ ಮರಕ್ಕೆ ನೇಣು ಬಿಗಿದುಕೊಳ್ಳುವ' ವ್ಯವಸ್ಥೆಯನ್ನು ಕಾಣುತ್ತೇವೆ. ಇಷ್ಟಾನೋ ಕಷ್ಟಾನೋ ತನ್ನ ಹಿಂದಿನ ಪರಂಪರೆ, ಗೊಡ್ಡು ಸಂಪ್ರದಾಯ, ಆಚರಣೆಗಳಿಗೆ ಜೋತು ಬೀಳುವಂತಹ ಸಂದರ್ಭವನ್ನು ನೋಡುತ್ತೇವೆ. ಕೆಲವೊಮ್ಮೆ ಆ ಕಟ್ಟುಪಾಡುಗಳನ್ನು ಆಕಸ್ಮಿಕವಾಗಿ ಮೀರಿದರೆ ಅದರ ಫಲಿತಾಂಶವೇ ಬೇರೆಯಾಗುತ್ತದೆ. ಜೊತೆಗೆ ಆ ಮನೆತನದ ಗೌರವಕ್ಕೆ ಧಕ್ಕೆ ತರುವ ಸಂದರ್ಭವೂ ಹೆಚ್ಚಿರುತ್ತದೆ. ಇಲ್ಲಿ ಯಯಾತಿಯ ಜೀವನದ ಕಥೆಯೂ ಸಹ ಹೀಗೆಯೇ ನಡೆಯುತ್ತದೆ. ಅದೆಂದರೆ ನಹುಷ ಮಹಾರಾಜನ ವಂಶದ ಪರಂಪರೆಯಲ್ಲಿ ಹೆಣ್ಣನ್ನು ಒಂದು ಭೋಗದ ವಸ್ತುವಾಗಿಸಿಕೊಂಡಿರುವುದು ಇಲ್ಲಿ ಬಿಚ್ಚಿಕೊಳ್ಳುತ್ತದೆ. ಅರಸನಾದ ಮಾತ್ರಕ್ಕೆ ಲೋಕದಲ್ಲಿಯ ಎಲ್ಲಾ ಹೆಣ್ಣುಗಳು ತನ್ನ ವಶದಲ್ಲಿರಬೇಕು, ಅವರು ಎಂದಿಗೂ ತನ್ನ ಭೋಗಕ್ಕಾಗಿಯೇ ಇರುವುದು ಎಂಬುದು ಹೆಣ್ಣಿನ ಮೇಲಿದ್ದಂತಹ ದೃಷ್ಟಿ ಮತ್ತು ಕಾಮುಕತೆ ಇಲ್ಲಿ ಅನಾವರಣಗೊಳ್ಳುತ್ತಿದೆ.

ಒಬ್ಬ ತಾಯಿಗೆ ತನ್ನ ಮಗುವಿನ ಮೇಲೆ ಇರಬೇಕಾದ ಜವಾಬ್ದಾರಿ, ಅಕ್ಕರೆ, ಮಮತೆ, ಪ್ರೀತಿ ಎಲ್ಲವನ್ನು ಸಹ ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ತನ್ನ ಮಗು ತನ್ನಿಂದ ದೂರವಾಗುತ್ತದೆ ಎಂದಾಗ ಆ ತಾಯಿಗೆ ಆಗುವ ನೋವು, ಸಂಕಟಗಳನ್ನು ಇಲ್ಲಿ ಬಹಳ ಸೂಕ್ಷ್ಮವಾಗಿ ವಿವರಿಸಲಾಗಿದೆ. 'ಮಗು ಎಷ್ಟು ದೊಡ್ಡದಾದರೂ ತಾಯಿಯ ದೃಷ್ಟಿಯಲ್ಲಿ ಅದು ಎಂದಿಗೂ ಚಿಕ್ಕದೇ. ಆಶ್ರಯದಲ್ಲಿ ನೀನು ಜಪ್ಪಿಸಿಕೊಂಡಿರಬೇಕು ತಿಳಿಯಿತೇ? ಅಲ್ಲಿಯ ಹೊಳೆಯಲ್ಲಿ ಮೊಸಳೆಗಳಿರಬಹುದು, ಅಲ್ಲಿಯ ಕಾಡಿನಲ್ಲಿ ವನ್ಯ ಮೃಗಗಳಿರಬಹುದು, ಎಲ್ಲಿಯೂ ನೀನು ಜೀವವನ್ನು ಅಪಾಯಕ್ಕೀಡು ಮಾಡಕೂಡದು'[3]. ಈ ಮಾತನ್ನು ನಾವು ಪ್ರಸ್ತುತಕ್ಕೆ ಹೋಲಿಸಿ ನೋಡುವುದಾದರೆ ಇಂದಿನ

ಆಧುನಿಕ ಕಾಲದಲ್ಲಿ ಮಾನವರ ಸಂಬಂಧಗಳ ನಡುವೆ ಅಂತರ ಕಡಿಮೆಯಾಗುತ್ತಿರುವುದನ್ನು ಕಾಣಬಹುದು. ನಮ್ಮ ಒತ್ತಡದ ಬದುಕಿನಲ್ಲಿ ಸಂಬಂಧಗಳಿಗೆ ಹೆಚ್ಚು ಆಸಕ್ತಿ ಇಲ್ಲದಿರುವುದು ತಿಳಿಯುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಮಕ್ಕಳಿಂದ ತಾಯಿ ದೂರವಿರುವುದೇ ಹೆಚ್ಚು. ಆ ಮಗುವಿಗೆ ತಾಯಿಯ ಲಾಲನೆ, ಪಾಲನೆ ಇಲ್ಲದೇ ಬೇರೆ ಆಯಿ (ಕೆಲಸದ ವ್ಯಕ್ತಿ ಅಥವಾ ಬೇಬಿ ಸಿಟ್ಟಿಂಗ್ ಶಾಲೆಗೆ)ಜೊತೆ ಬಿಡುವುದನ್ನು ಹಾಗೇ ಆ ಮಕ್ಕಳಿಗೆ ಬೇಕಾದ ಪೌಷ್ಠಿಕ ಆಹಾರವನ್ನು ಸರಿಯಾದ ಸಮಯಕ್ಕೆ ಸಿಗದೆ ಅನಾರೋಗ್ಯ, ಅಪೌಷ್ಠಿಕತೆಯಿಂದ ಬಳಲುತ್ತಿರುವುದನ್ನು ಕಾಣುತ್ತೇವೆ.

ಆಧುನಿಕ ಯುಗದಲ್ಲಿ ತಾಯಿಯಾದವಳು ತನ್ನ ಮಗುವಿಗಿಂತ ಹೆಚ್ಚಾಗಿ ತನ್ನ ಸೌಂದರ್ಯಕ್ಕೆ ಒತ್ತು ಕೊಡುತ್ತಿರುವುದರಿಂದಲೂ ಮಗು ಹಾಗೂ ತಾಯಿಯ ಸಂಬಂಧಗಳು ಹೆಚ್ಚು ಭದ್ರವಾಗಿರಲು ಸಾಧ್ಯವಿಲ್ಲ. ಇದನ್ನು ಕಾದಂಬರಿಯ ಒಂದು ಸನ್ನಿವೇಶವೇ ತಿಳಿಸುತ್ತದೆ. "ಮಕ್ಕಳಿಗೆ ಮೊಲೆ 'ಹಾಲನ್ನೂಡಿದರೆ ಹೆಂಗಸರ ರೂಪ ಬಾಡಿ ಹೋಗುತ್ತದಂತೆ". ತಾಯಿ ತನ್ನ ಎದೆಯ ಹಾಲನ್ನು ಊಡುವಾಗ ತನ್ನಲ್ಲಿಯ ಮಮತೆ, ಪ್ರೀತಿ, ವಿಶ್ವಾಸವನ್ನು ಧಾರೆಯೆರೆಯುತ್ತಾಳೆ. ಇದರಿಂದ ಇವರಿಬ್ಬರ ಸಂಬಂಧ ಗಟ್ಟಿಗೊಳ್ಳುತ್ತದೆ. ಆದರೆ ಕೆಲವರು ತಮ್ಮ ಸೌಂದರ್ಯವನ್ನು ಹಾಗೆ ಉಳಿಸಿಕೊಳ್ಳಲು ನೋಡುತ್ತಾರೆ. ಕೊನೆಯಲ್ಲಿ ಪಶ್ಚಾತ್ತಾಪದ ಧಗೆಯಲ್ಲಿ ಇಂಚು ಇಂಚಾಗಿ ಸುಟ್ಟುಹೋಗುತ್ತಾರೆ.

ಇಂದಿನ ಜಾಗತಿಕ ಸಂದರ್ಭದಲ್ಲಿ ಸೌಂದರ್ಯ ಸ್ಪರ್ಧೆಯು ಮುಂಚೂಣಿ ಸ್ಥಾನವನ್ನು ಪಡೆದುಕೊಂಡಿದೆ. ಯಾಕೆಂದರೆ ಹಿಂದೆ ಇದ್ದಂತಹ ಬಣ್ಣದ ಬದುಕು ಇವತ್ತಿಗೂ ಸಹ ಸೌಂದರ್ಯ ಸ್ಪರ್ಧೆಯ ಮೂಲಕ ಜೀವಂತವಾಗಿ ಉಳಿದುಕೊಂಡು ಬಂದಿದೆ. ಇಲ್ಲಿ ಕೇವಲ ತಾಯಿಯ ಸಂಬಂಧದ ಜೊತೆಗೆ ಮಗುವು ಎಂತಹ ಸ್ವಭಾವವನ್ನು ಹೊಂದಿರುತ್ತದೆ. ಅದರ ಮನಸ್ಸು ಎಷ್ಟು ಕೋಮಲ ಮತ್ತು ಸೂಕ್ಷ್ಮ ಮತಿಯಾಗಿರುತ್ತದೆ ಎಂಬುದರ ಜೊತೆಗೆ ಯಾವ ಯಾವ ಅಂಶಗಳನ್ನು ತನ್ನಲ್ಲಿ ಬೇಗ ಗ್ರಹಿಸಿ ತನ್ನಲ್ಲಿ ಉಳಿಸಿ ಬೆಳೆಸಿಕೊಳ್ಳುತ್ತದೆ ಎಂಬುದನ್ನು ತಿಳಿಯುತ್ತೇವೆ. 'ತಾಯಿಯ ಹಾಲನ್ನೇ ಅಲ್ಲವೇ ಎಳೆಯ ಮಕ್ಕಳು ಕುಡಿಯುವುದು?, ಹಾಗಿದ್ದರೆ ನೀನು ನನ್ನ ತಾಯಿಯೇ'. 'ಹಸ್ತಿನಾಪುರದ ರಾಜ ಪುತ್ರ ನಾನು. ಯುವರಾಜ, ಹಾಗಿರುವಾಗಲೂ ಎಳೆಯವನಿದ್ದಾಗ ಯಾವಳೋ ಒಬ್ಬ ಕ್ಷುದ್ರ ದಾಸಿಯ ಹಾಲನ್ನೆಕೆ ನಾನು ಕುಡಿಯಬೇಕಾಯಿತು? ನನ್ನ ತಾಯಿ ತನ್ನ ಹಾಲನ್ನೇಕೆ ಊಡಲಿಲ್ಲ? ಕಲಿಕೆಯ ಹಾಲನ್ನು ಕುಡಿದ ನಾನು ಆಕೆಯನ್ನು ತಾಯಿಯೆಂದು ಯಾತಕ್ಕೆ ಕರೆಯಬಾರದು?'[೬] ಹೀಗೆ ಮಕ್ಕಳು ತಮ್ಮ ಮನಸ್ಸನ್ನು ತುಂಬಾ ಸೂಕ್ಷ್ಮವಾಗಿ ಗ್ರಹಿಸುತ್ತಾರೆ. ಜೊತೆಗೆ ಬೇರೆ ಬೇರೆಯ ವಿಧಾನಗಳಲ್ಲಿ ಆಲೋಚಿಸುವ ಶಕ್ತಿ ಅವರಲ್ಲಿ ಹೆಚ್ಚು ತುಂಬಾ ಮೃದು ಸ್ವಭಾವದವರಾಗಿರುತ್ತಾರೆ.

ತನ್ನೊಳಗೆ ತಾನು ಎಣಿಕೆ ಮಾಡಿ ಕೂಡಿ ಕಳೆದು ನಂತರದಲ್ಲಿ ಅವರಿಗೆ ಸರಿ ಎನಿಸಿದ್ದನ್ನು ಮಾಡಲು ಮುಂದಾಗುತ್ತಾರೆ. ಚಿಕ್ಕವಯಸ್ಸಿನ ಮಕ್ಕಳಿಗೆ ಬುದ್ಧಿ ತುಂಬಾ ಚುರುಕಾಗಿರುತ್ತದೆ ಎಂಬುದನ್ನು ಈ ಮೂಲಕ ಕಾಣುತ್ತೇವೆ.

ಮನುಷ್ಯನು ತನ್ನಸ್ವಾರ್ಥ ಸಾಧನೆಗಾಗಿ ಏನೆಲ್ಲ ಮಾಡುತ್ತಾನೆ. ಅವುಗಳಿಂದ ಸಂಪೂರ್ಣವಾದ ಆತ್ಮತೃಪ್ತಿ ಸಿಗದಿದ್ದರೂ ಅದು ತನ್ನದೇ ಆಗಿರಬೇಕು ಎಂಬುದು ಅವರಲ್ಲಿ ಮೂಡಿದಾಗ ಇನ್ನೊಬ್ಬರ ನೋವುಗಳು, ದುಃಖ ಯಾವೊಂದು ಅವರಿಗೆ ಕಾಣಿಸದು. ಒಂದು ಜೀವ ಬದುಕುಳಿಯಬೇಕಾದರೆ ಇನ್ನೊಂದು ಜೀವವನ್ನು ಆಶ್ರಯಿಸಲೇಬೇಕು. ಆದರೆ ಮನುಷ್ಯ ತನ್ನನ್ನು ಆಶ್ರಯಿಸುವ ಮತ್ತೊಂದು ಜೀವಿಯನ್ನು ಹೀನಾಯವಾಗಿ ಕಾಣುವ ಮತ್ತು ನಡೆದುಕೊಳ್ಳುವ ಪ್ರವೃತ್ತಿ ಬೆಳೆಸಿಕೊಂಡಿರುವನು. "ಯುವರಾಜರೆ ನೀವಿನ್ನೂ ಚಿಕ್ಕವರು. ಈ ಬದುಕನ್ನು ನೋಡುನೋಡುತ್ತಿದ್ದ ಹಾಗೆ ಒಂದು ಕಾಲಕ್ಕೆ ಕಪ್ಪಗಾಗಿದ್ದ ನನ್ನ ಕೂದಲು ಹಣ್ಣಾಗಿದೆ. ನನ್ನ ಅನುಭವದ ಮಾತನ್ನು ತಾವು ಲಕ್ಷ್ಯದಲ್ಲಿರಿಸಿಕೊಳ್ಳಬೇಕು. ಮನುಷ್ಯನಲ್ಲಿಯ ದಯೆಯನ್ನು ಆಧರಿಸಿ ಈ ಲೋಕ ನಡೆಯುವುದಿಲ್ಲ. ಅದು ನಡೆಯವುದು ಆತನ ಮುಂಗೈಯ ಬಲವನ್ನು ಆಧರಿಸಿ. ಪ್ರೇಮವೊಂದನ್ನೇ ನಂಬಿಕೊಂಡು ಮನುಷ್ಯ ಬದುಕಲಾರ ಇನ್ನೊಬ್ಬರನ್ನು ಸೋಲಿಸಿಯೇ ಆತ ಬದುಕುವುದು. ಈ ಪ್ರಪಂಚದಲ್ಲಿ ಮನುಷ್ಯ ಸದಾಕಾಲವೂ ಒದ್ದಾಡುವುದು ಭೋಗಕ್ಕಾಗಿ! ತ್ಯಾಗದ ಪುರಾಣ ದೇವಸ್ಥಾನಗಳಲ್ಲಿ ಸರಿ. ಆದರೆ ಬದುಕು ದೇವಸ್ಥಾನವಲ್ಲ; ಅದೊಂದು ರಣಾಂಗಣ."[೮]

ಜೀವನ ಎಂಬುದು ಒಂದು ರೀತಿಯ ರಣಾಂಗಣವೇ. ಆದರೆ ಆ ಯುದ್ಧ ಭೂಮಿಯಲ್ಲಿ ಯಾವ ಅಸ್ತ್ರವನ್ನು ಉಪಯೋಗಿಸಿದರೆ ಏನಾಗುತ್ತದೆ ಮತ್ತು ಅದನ್ನು ಯಾರ ಮೇಲೆ ಪ್ರಯೋಗಿಸಬೇಕು ಎಂಬುದನ್ನು ಅರಿಯಬೇಕಾಗುತ್ತದೆ. ಇಲ್ಲವಾದಲ್ಲಿ ಅದು ರಣಾಂಗಣ ರುದ್ರಭೂಮಿಯಾಗಿ ಪರಿವರ್ತನೆಯಾಗುವ ಸಾಧ್ಯತೆಗಳೇ ಜಾಸ್ತಿ. ಒಂದು ಜೀವಿ ಇನ್ನೊಂದು ಜೀವಿಯನ್ನು ಅವಲಂಬಿಸಿ ಬದುಕುವುದು ಪ್ರಕೃತಿದತ್ತವಾದದ್ದು ಮತ್ತು ಸಹಜವಾದದ್ದು. ಆದರೆ ಮನುಷ್ಯ ಒಬ್ಬರನ್ನು ಇನ್ನೊಬ್ಬರು ಅವಲಂಬಿಸಿದಾಗ ಅವಲಂಬಿಸಿದವರಿಗೆ ಹೆಚ್ಚು ನೋವು, ಸಂಕಟಗಳನ್ನು ನೀಡಿ ಅವರ ಸಮಾಧಿಯ ಮೇಲೆ ನಿಂತು ಕೇಕೆ ಹಾಕುವ ಜನರೇ ಹೆಚ್ಚು. ಇದಕ್ಕೆ ಇನ್ನೊಂದು ಅಂಶವನ್ನು ಪ್ರಸ್ತುತ ಸಂದರ್ಭದಲ್ಲಿ ಹೇಳಬಹುದು.

ಮಾನವನಲ್ಲಿ ಭಿನ್ನತೆಗಳು, ಬಿನ್ನಾಭಿಪ್ರಾಯಗಳು ಹೆಚ್ಚಿವೆ. ಇಲ್ಲಿ ಮೇಲು ಕೀಳು, ಬಡವ ಬಲ್ಲಿದ ಮೇಲ್ವರ್ಗ ಕೆಳವರ್ಗ ಹೀಗೆ ತಾರತಮ್ಯವನ್ನು ಕಾಣುತ್ತೇವೆ. ಕೂಲಿ ಕಾರ್ಮಿಕರು, ರೈತರು

ಮಾಲೀಕರು ಈ ರೀತಿಯಾಗಿ ಹಂತ ಹಂತವಾಗಿ ಶೋಷಣೆಗಳು ಆರಂಭವಾಗಿವೆ. ಕಾರ್ಮಿಕರ ಶ್ರಮದಿಂದ ಮಾಲಿಕನ ಸ್ವತ್ತು ಹೆಚ್ಚಿದ್ದರೂ ಕೂಡ ಆ ಮಾಲೀಕ ಕಾರ್ಮಿಕರಿಗೆ ಸರಿಯಾದ ವೇತನವನ್ನು ನೀಡದಿರುವುದು ಅವರಲ್ಲಿನ ಕಡೆಯ ಅಲ್ಪ ಸ್ವಲ್ಪ ಶ್ರಮವನ್ನು ಸಹ ಬಿಡದೆ ದೋಚುತ್ತಾನೆ. ಇವರ ಶ್ರಮವಿಲ್ಲದ್ದದರೆ ಮಾಲೀಕ ಎಂದಿಗೂ ಮಾಲಿಕನಾಗಿ ಉಳಿಯಲು ಸಾಧ್ಯವಿಲ್ಲ. ಉದಾಹರಣೆಗೆ ಪ್ರಜೆಗಳೇ ಇಲ್ಲದಿದ್ದಾಗ ಅರಸನಿಗೆ ಅರಸನಾಗುವ ಯಾವ ಅರ್ಹತೆಯು ಇರುವುದಿಲ್ಲ. ಪ್ರಜೆಗಳಿದ್ದಾಗ ಮಾತ್ರ ಅವನು ಅರಸನೆನಿಸಿಕೊಳ್ಳಲು ಸಾಧ್ಯ.

ಮನುಷ್ಯ ಪ್ರಪಂಚದಲ್ಲಿ ಬದುಕಿರುವುದು ಭೋಗಕ್ಕಾಗಿಯೇ! ಎಂದು ಹೇಳುವ ಸಂದರ್ಭ ಎಲ್ಲೋ ಒಂದು ಕಡೆ ಅದು ತನ್ನ ದಾರಿಯನ್ನು ಬದಲಿಸಿಕೊಳ್ಳುತ್ತದೆಯೇನೋ ಎಂದು ಅನಿಸುತ್ತದೆ. ಜೀವನದಲ್ಲಿ ಕೇವಲ ಭೋಗ ಒಂದಿದ್ದರೆ ಮಾತ್ರ ಸಾಲದು. ತ್ಯಾಗವು ಸಹ ಇರಬೇಕು. ಇಲ್ಲವಾದಲ್ಲಿ ಜೀವನವು ಪರಿಪೂರ್ಣ ಎನಿಸಲು ಸಾಧ್ಯವಿಲ್ಲ. ಕೇವಲ ಭೋಗವನ್ನು ಹುಡುಕುತ್ತಾ ಸಾಗಿದರೆ ಅದರ ಹಿಂದೆ ತ್ಯಾಗವೂ ಸಹ ಇರುವುದನ್ನು ನಾವು ಮರೆಯುವಂತಿಲ್ಲ. ಒಬ್ಬ ವ್ಯಕ್ತಿಗೆ ತಾನು ಬಯಸಿದ್ದು ಸಿಗಬೇಕಾದರೆ ಅವನಿಗೆ ಬೇಕಾದದ್ದು ತನ್ನ ತ್ಯಾಗವನ್ನು ಮಾಡಿದಾಗ ಮಾತ್ರ ಆ ವ್ಯಕ್ತಿ ಭೋಗಿಸಲು ಸಾಧ್ಯವಾಗುತ್ತದೆ.

ಜೀವಾಪಾಯದ ಕಾಯಿಲೆಯಿಂದ ನಾಲ್ಕು ತಿಂಗಳ ಬಳಿಕ ಆ ರಾತ್ರಿ ಅಲಕೆಯ ಅಮೃತ ಹೀರಿ ನಡೆಯುವುದಕ್ಕೆಂದು ಮೇಲೆದ್ದು ಬಲಗಾಲಿನ ಭಯಾಂಕರ ನೋವಿನಿಂದ ಚೀತ್ಕರಿಸಿ ಬೀಳುತ್ತಾನೆ. ಅಂತಹ ಸಂದರ್ಭದಲ್ಲಿಯೇ ಕೆಲವು ದರ್ಶನಗಳು ದೊರೆಯುತ್ತವೆ. ಯಯಾತಿಯ 'ಕಳೆದ ಹತ್ತು ವರ್ಷಗಳಲ್ಲಿ ಆ ದೇಹದ ಸೌಂದರ್ಯವನ್ನು ಸಾಮರ್ಥ್ಯವನ್ನು ಬೆಳೆಸುವುದರಲ್ಲಿ ಹಗಲು ರಾತ್ರಿ ಶ್ರಮಿಸಿದೆ. ಅದೇ ದೇಹವೀಗ ತಿರುಗಿ ಬೀಳಬೇಕೆ? ಮನುಷ್ಯ ದೇಹವನ್ನು ಪ್ರೀತಿಸುತ್ತಾನೆ; ಆ ಪ್ರೀತಿಗೆ ಕೊನೆಯೆಂಬುದಿಲ್ಲ. ಆದರೆ ದೇಹ ಮಾತ್ರ ತನ್ನನ್ನು ಅದೇ ರೀತಿಯಾಗಿ ಪ್ರೀತಿಸುವುದಿಲ್ಲ. ಸಂದರ್ಭ ಬಂದಾಗ ವೈರವನ್ನು ಸಾಧಿಸುತ್ತದೆ" ಎಂಬ ಮಾತುಗಳಲ್ಲಿ ಅಂತಹ ದರ್ಶನವಿದೆ. ಈ ಕಾದಂಬರಿಯು ದೇಹ, ಆತ್ಮಗಳ ನಡುವಿನ ಸಂಘರ್ಷವೂ ಹೌದು. ಸುಖ ದೇಹಕ್ಕೆ ಆನಂದ ಆತ್ಮಕ್ಕೆ. ಆತ್ಮವನ್ನು ಮರೆತ ಯಯಾತಿ ದೇಹ ಸುಖದ ಬೆನ್ನು ಹತ್ತುತ್ತಾನೆ. ಅದಕ್ಕೆ ಕಾರಣ ದೇಹದಲ್ಲಿ ಆತ್ಮದ ಹಸಿವೆಯೇ ಕಾರಣ. ಆದರೆ ಆ ಆತ್ಮದ ತೃಪ್ತಿಯಿಂದ ದೇಹ ಸಂತೃಪ್ತವಾಗಬಲ್ಲದು. ದೇಹದ ತೃಪ್ತಿಯಿಂದಷ್ಟೇ ಆತ್ಮ ತೃಪ್ತಿ ಹೊಂದಲಾರದು.

ಯಯಾತಿ ಕಾದಂಬರಿಯಲ್ಲಿನ ಸಾತ್ವಿಕ ಅರಿವಿನ ಸಂಕೇತ ಕಚ. ಅದೊಂದು ಉದಾತ್ತ ಪಾತ್ರ, ಪಾಪಿಗಳ ಉದ್ಧಾರಕ್ಕಾಗಿ ಪರಿತಪಿಸಿ ತಪಗೈಯುವ ಪಾತ್ರ. ಪೌರಾಣಿಕವಾಗಿ ಕಚ ದೇವ

ಗುರುವಾದ ಬೃಹಸ್ಪತಿಚಾರ್ಯರ ಮಗ. ಆಂಗಿರಸರ ಶಾಂತಿ ಯಜ್ಞದಲ್ಲಿ ಭಾಗವಹಿಸಿದಾಗ ಯಯಾತಿಗೆ ಪರಿಚಯವಾಗುತ್ತಾನೆ. 'ಪುರಾಣದ ಕಥೆಯಲ್ಲಿ ಕಚ ಒಂದು ಸಲ ಬಂದು ಹೋಗುತ್ತಾನೆ. ಆದರೆ ಖಾಂಡೇಕರರ 'ಯಯಾತಿ'ಯಲ್ಲಾದರೋ ಯಯಾತಿ ಅಭಿಷಿಕ್ತ ದೊರೆಯಂತೆ ನಾಯಕನಾದರೆ, ಕಚ ಅಭಿಷಿಕ್ತ ನಾಯಕನಂತೆ ದೊರೆಯಾಗುತ್ತಾನೆ'[೧೦] ಎಂದು ಹೊಸ್ಕೆರೆ ಎಸ್. ಶಿವಸ್ವಾಮಿ ಅವರು ಹೇಳಿದ್ದಾರೆ.

ಯಯಾತಿ ಪಕ್ಷಿಯೊಂದನ್ನು ಕೊಲ್ಲಲು ಗುರಿಯಿಟ್ಟಾಗ 'ತಡೆ ನಿಲ್ಲು' ಎಂದು ಹೇಳುವ ಮೂಲಕ ಕಾದಂಬರಿಯಲ್ಲಿ ಕಚನ ಪ್ರವೇಶವಾಗುತ್ತದೆ. ಯಯಾತಿಯ ಕೈಯಿಂದ ಸಾಯಲಿರುವ ಹಕ್ಕಿಯನ್ನು ಉಳಿಸಿದ ಕಚನೇ ಎರಡೂವರೆ ಸಾರಿ ಶುಕ್ರಾಚಾರ್ಯರು ತಿಳಿಸಿದ್ದ ವಿಶಾಪವನ್ನು ಉಚ್ಚರಿಸಿ ಸಾವಿನ ಸಮೀಪದಲ್ಲಿದ್ದ ಯಯಾತಿಯನ್ನು ಬದುಕಿಸುತ್ತಾನೆ. ಹೀಗೆ ಆರಂಭ ಮತ್ತು ಅಂತ್ಯಗಳೆರಡರಲ್ಲೂ ಜೀವವೊಂದನ್ನು ಉಳಿಸಿದ ಕಚನ ವ್ಯಕ್ತಿತ್ವ ಉದಾತ್ತವಾದದ್ದು, ದಾರ್ಶನಿಕವಾದದ್ದು.

ಕಚ ನೇರವಾಗಿ ತನ್ನ ಕಥೆಯನ್ನು ಹೇಳಿಕೊಂಡಿಲ್ಲ. ಕಚನ ಪಾತ್ರವು ಯಯಾತಿ, ದೇವಯಾನಿ, ಶರ್ಮಿಷ್ಠೆಯರ ಅನುಭವಗಳನ್ನು ಹೇಳಿಕೊಳ್ಳುವ ಸಂದರ್ಭದಲ್ಲಿ ವ್ಯಕ್ತಿತ್ವ ಒಂದೇ ರೀತಿಯಲ್ಲಿ ಚಿತ್ರಿತವಾಗಿದೆ. ಅಂತಹ ವ್ಯಕ್ತಿತ್ವದೊಡನೆ ಮೂವರು ವಿಭಿನ್ನ ನೆಲೆಯಲ್ಲಿ ಅನುಸಂಧಾನ ನಡೆಸಿದ್ದಾರೆ. ಈ ವಿಭಿನ್ನ ದೃಷ್ಟಿಕೋನವೇ ಮೂರು ಜನರ ವ್ಯಕ್ತಿತ್ವ ರೂಪುಗೊಳ್ಳಲು ಕಾರಣವಾಗಿದೆ. ಇತರರ ವ್ಯಕ್ತಿತ್ವವನ್ನು ರೂಪಿಸಬಲ್ಲ ಅರಿವಿನ ವ್ಯಕ್ತಿತ್ವ ದರ್ಶನದ ಶಕ್ತಿತ್ವ ಕಚನದು.

ಮನುಷ್ಯನ ಮನಸ್ಸು ತುಂಬ ಚಂಚಲತೆಯನ್ನು ಹೊಂದಿರುವಂತಹದ್ದು. ಅದನ್ನು ನಿಯಂತ್ರಿಸದೇ ಅದರಷ್ಟಕ್ಕೇ ಅದನ್ನು ಬಿಟ್ಟರೆ ಆಗುವ ಕೆಲಸಗಳಲ್ಲಿ ಅನಾಹುತಗಳೇ ಹೆಚ್ಚು. ಮನಸ್ಸಿನ ಬಗ್ಗೆ ಖಾಂಡೇಕರರು ಕಚನ ಮಾತಿನ ಮೂಲಕವಾಗಿ ಹೇಳಿರುವುದನ್ನು ಗಮನಿಸಬಹುದು. 'ಮನುಷ್ಯನ ಮನಸ್ಸು ಒಂದು ಕುದುರೆ ಇದ್ದ ಹಾಗೆ. ಅದು ಯಾವಾಗ ಯಾವುದರ ಮೇಲೆ ನೆಗೆದೀತು ಎಂದು ಹೇಳಲಾಗುವುದಿಲ್ಲ'[೧೧]. ಇಲ್ಲಿ ಮನಸ್ಸನ್ನು ಒಂದು ಕುದುರೆಗೆ ಹೋಲಿಕೆ ಮಾಡಿ ಹೇಳಲಾಗಿದೆ. ಕುದುರೆ ಎಷ್ಟು ಚಂಚಲವೊ ಹಾಗೆ ಮನಸ್ಸು ಕೂಡ ಆ ಕುದುರೆಗೆ ಕಡಿವಾಣ ಇದ್ದಾಗ ತಾನು ಇಷ್ಟ ಬಂದಹಾಗೆ ಆಡುತ್ತದೆ. ಆದರ ಜೊತೆಗೆ ತಾನೇನು ಮಾಡುತ್ತಿದ್ದೇನೆ, ಎಲ್ಲಿದ್ದೇನೆ ಎಂಬುದೇ ತಿಳಿಯುವುದಿಲ್ಲ. ಇಂತಹ ಸಂದರ್ಭದಲ್ಲಿ ಯಾವ ಅನಾಹುತ, ಅಪಘಾತಗಳಿಗಾದರೂ ಈಡಾಗಬಹುದು. ಇದಕ್ಕೆ ವಾಸ್ತವತೆಯಲ್ಲಿನ ಅಂಶವನ್ನು ಎತ್ತಿಕೊಳ್ಳುವುದಾದರೆ ಆಧುನಿಕತೆ, ಜಾಗತೀಕರಣದ ಸಂದರ್ಭದಲ್ಲಿ ಎಲ್ಲವನ್ನೂ ಸಮಯಕ್ಕಿಂತ ಮುಂಚೆಯೇ ಮುಗಿಸಬೇಕು. ಅದು

ಸರಿಯಾಗಿದೆಯೋ ಅಥವಾ ಅದರಿಂದ ಯಾವ ಅನುಕೂಲ, ಅನಾನುಕೂಲಗಳ ಯೋಚನೆಯೇ ಇರುವುದಿಲ್ಲ. ಒಟ್ಟಿನಲ್ಲಿ ಆ ಕೆಲಸವನ್ನು ಮಾಡಿ ಮುಗಿಸಿದರಷ್ಟೇ ಸಾಕು ಎಂಬಂತಹ ಮನಸ್ಥಿತಿಗಳು ಜಾಸ್ತಿ. ಈ ಕಾಲದಲ್ಲಿ ಭೌತಿಕ ವಸ್ತುಗಳನ್ನೇ ತೆಗೆದುಕೊಳ್ಳುವುದಾದರೆ ಅದರ ಅಗತ್ಯತೆ ಇದೆಯೋ ಅಥವಾ ಇಲ್ಲವೋ ಎಂಬುದು ಮುಖ್ಯವಾಗದೆ ವಸ್ತು ವ್ಯಾಮೋಹ ಎಲ್ಲರನ್ನೂ ಆವರಿಸಿದೆ. ಇದು ಭೌತಿಕ ಸುಖವನ್ನರಸಿ ಹೊರಟಿರುವ ಇಡೀ ಮಾನವಕುಲದ ವಸ್ತುಸ್ಥಿತಿ.

ಮನಸ್ಸೆಂಬುದು ಒಂದು ಮರ್ಕಟದಂತೆ. ಮಂಗನ ಹಾಗೆ ಹೆಂಡ ಕುಡಿಸಿ ಅದಕ್ಕೆ ಅದರ ತಲೆಗೆ ಚೇಳಿನಿಂದ ಕುಟುಕಿಸಿದಾಗ ಹೇಗೆ ಆಡುತ್ತದೆಯೋ ಹಾಗೆಯೇ ಮನಸ್ಸಿಗೆ ನಿಯಂತ್ರಣವಿಲ್ಲದೆ ಹೋಗುತ್ತದೆ. ಒಳ್ಳೆಯದನ್ನು ಗಳಿಸುವುದಕ್ಕಾಗಿ ಕೆಲವರು ಹೋರಾಡಿದರೆ ಇನ್ನೂ ಕೆಲವರು ಕೆಟ್ಟದ್ದನ್ನು ಮಾಡುವುದಕ್ಕಾಗಿ ಶ್ರಮ ಹಾಕುತ್ತಾರೆ. ಜೊತೆಗೆ ಬೇರೆಯವರಿಗೆ ನೋವುಂಟುಮಾಡಿ ತಾವು ಸಂತೋಷ ಪಡುತ್ತಾರೆ. ಕಾದಂಬರಿಯಲ್ಲಿ ಇಂತಹ ಮನಃಸ್ಥಿತಿಯ ಶುಕ್ರಾಚಾರ್ಯರನ್ನು ಗುರುತಿಸಬಹುದು. ಆದರೆ ಕಚ ಇದಕ್ಕೆ ತದ್ವಿರುದ್ಧವಾದವನಾಗಿದ್ದಾನೆ. ಇಬ್ಬರೂ ಋಷಿ ಮುನಿಗಳೆ ಆಗಿದ್ದರೂ ಸಹ ಬೇರೆ ಬೇರೆ ಮನಃಸ್ಥಿತಿವುಳ್ಳವರಾಗಿದ್ದಾರೆ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಶುಕ್ರಾಚಾರ್ಯರು ಶಾಪವನ್ನು ಕೊಡುವುದಕ್ಕೆ ತಪಸ್ಸನ್ನಾಚರಿಸಿದರೆ ಕಚ ಅದನ್ನು ನಿವಾರಿಸಲು (ವಿಶಾಪ) ತಪಸ್ಸನ್ನಾಚರಿಸಿ ಗೆಲ್ಲುತ್ತಾನೆ. ‘ದೈತ್ಯ ಗುರುಗಳಾದ ಶುಕ್ರಾಚಾರ್ಯರು ಉಗ್ರವಾದ ತಪಸ್ಸನ್ನಾಚರಿಸಿ ಸಂಜೀವಿನಿ ವಿದ್ಯೆಯನ್ನು ಗಳಿಸಿಕೊಂಡಿದ್ದಾರೆಂದು ಇತ್ತೀಚೆಗೆ ನಾನು ಕೇಳಿದೆ. ಆ ವಿದ್ಯೆಯಿಂದ ಸತ್ತವರನ್ನು ಬದುಕಿಸಬಹುದು. ಆ ವಿದ್ಯೆಯನ್ನು ನಾನು ಸಾಧಿಸಬಲ್ಲೆನಾದರೆ ಬಾಡಿ ಹೋಗುವ ಹೂಗಳನ್ನು ಮತ್ತೆ ಅರಳುವಂತೆ ಮಾಡುವುದಕ್ಕೆಂದು ಅದನ್ನು ಉಪಯೋಗಿಸಿಯೇನು’[೧]. ಈ ಮೊದಲಿನ ವಿವರದಂತೆ ಕೆಟ್ಟದ್ದಕ್ಕಾಗಿಯೇ ಶುಕ್ರಾಚಾರ್ಯರು ಸಂಜೀವಿನಿ ವಿದ್ಯೆಗಾಗಿ ತಪಸ್ಸನ್ನಾಚರಿಸಿದರೆ ಕಚ ನಿಸ್ವಾರ್ಥತೆಯಿಂದ ಮಾನವ ಕುಲದ ರಕ್ಷಣೆಗಾಗಿ ಸಂಜೀವಿನಿ ವಿದ್ಯೆಯನ್ನು ತನ್ನದಾಗಿಸಿಕೊಳ್ಳುತ್ತಾನೆ.

ಒಂದು ರಾಷ್ಟ್ರ ಮತ್ತೊಂದು ರಾಷ್ಟ್ರಗಳ ಮೇಲೆ ಯುದ್ಧ ಸಾರಲು ತನ್ನದೇ ಆದಂತಹ ಹೊಸ ವಿಧಾನದಲ್ಲಿ ಅಣ್ವಸ್ತ್ರವನ್ನು ತಯಾರಿಸಿಕೊಳ್ಳುವಲ್ಲಿ ಮುಂದಾಗುತ್ತದೆ. ಉದಾಃ ಬಂಡವಾಳಶಾಹಿ ಹಾಗೂ ಸಾಮ್ರಾಜ್ಯಶಾಹಿ ಅಮೇರಿಕಾವು ಮೂರನೇ ಮಹಾ ಯುದ್ಧಕ್ಕಾಗಿ ಅಣ್ವಸ್ತ್ರಗಳ ತಯಾರಿ ನಡೆಸುತ್ತಿರುವುದು ತಿಳಿದಿರುವ ವಿಷಯವೇ ಆಗಿದೆ. ವಿಜ್ಞಾನ ಮುಂದುವರಿದಂತೆ ಅನುಕೂಲಗಳು ಎಷ್ಟಾಗಿವೆಯೊ, ಅದಕ್ಕಿಂತಲೂ ಅನಾನುಕೂಲಗಳೇ ಜಾಸ್ತಿಯಾಗಿವೆ. ಈ ನೆಲೆಯಲ್ಲಿ ಶುಕ್ರಾಚಾರ್ಯ ಮತ್ತು ಕಚನ ನಡುವೆ ವ್ಯತ್ಯಾಸವನ್ನು ಕಾಣುತ್ತೇವೆ.

ಮನುಷ್ಯ ಒಂದಲ್ಲ ಒಂದು ರೀತಿಯಾಗಿ ತನ್ನ ಜೀವನದಲ್ಲಿ ತೊಳಲಾಟ, ಜಂಜಾಟಗಳಲ್ಲೆ ಬದುಕುತ್ತಾ ಜೀವನವನ್ನು ಸಾಗಿಸುತ್ತಾನೆ. ಯಾವುದರಿಂದಲೂ ಸಹ ಸಂಪೂರ್ಣವಾದ ಮುಕ್ತಿಯನ್ನು ಹೊಂದಿಕೊಳ್ಳದಂತೆ ಕಾಣುತ್ತದೆ. ಈ ಮಾದರಿಯನ್ನು ಕುವೆಂಪು ಅವರು ತಮ್ಮ ವಿಶ್ವಮಾನವ ಸಂದೇಶವನ್ನು ಹೇಳುವಾಗ ಬಳಸಿದ್ದಾರೆ. ಅವರ ಮಾತುಗಳಲ್ಲೇ ಹೇಳುವುದಾದರೆ 'ಒಂದು ಮಗು ಹುಟ್ಟುವಾಗ ವಿಶ್ವಮಾನವನಾಗಿ ಹುಟ್ಟುತ್ತದೆ. ಅದೇ ಬೆಳೆಯುವಾಗ ಸಮಾಜದಲ್ಲಿನ ಜಾತಿ, ಧರ್ಮ, ಸಂಪ್ರದಾಯ ಎಂಬ ಹಲವಾರು ಕಟ್ಟುಪಾಡುಗಳಿಗೆ ಬಂಧಿತನಾಗುತ್ತದೆ'.

ಈ ಮಾನವ ಬದುಕಿನ ಜಂಜಾಟಗಳನ್ನು ಈ ಕಾದಂಬರಿಯಲ್ಲಿ ಆಂಗಿರಸರ ಒಂದು ಹೇಳಿಕೆಯ ಮುಖೇನ ಎಳೆಯೆಳೆಯಾಗಿ ಹಿಡಿದಿಟ್ಟಿದ್ದಾರೆ ಲೇಖಕರು. ಯಯಾತಿಯು ಶಾಪಕ್ಕೆ ವಿಶಾಪವನ್ನು ಕೇಳುವಾಗ ಈ ಸಂದರ್ಭವನ್ನು ಚಿತ್ರಿಸಿದ್ದಾರೆ. 'ಈ ಲೋಕದಲ್ಲಿ ಹುಟ್ಟಿಬಂದ ಪ್ರತಿಯೊಬ್ಬನೂ ಶಾಪಗ್ರಸ್ತನೇ!' ಮುಂದುವರಿದು ಅವರು ಹೇಳುತ್ತಾರೆ 'ನಾನು, ಕಚ, ನಿನ್ನ ತಂದೆ ನಾವೆಲ್ಲರೂ ನಮ್ಮ ನಮ್ಮ ರೀತಿಯಲ್ಲಿ ಶಾಪಗ್ರಸ್ತರೇ. ಕೆಲವರನ್ನು ಪೂರ್ವಜನ್ಮದ ಕರ್ಮ ಸುತ್ತಿಕೊಳ್ಳುತ್ತಿದೆ. ಇನ್ನು ಕೆಲವರು ತಂದೆ ತಾಯಿಗಳ ದೋಷದ ಫಲವನ್ನು ಅನುಭೋಗಿಸಬೇಕಾಗುತ್ತದೆ. ಸ್ವಭಾವ ದೋಷದಿಂದಾಗಿ ಕೆಲವರು ದುಃಖವನ್ನನುಭವಿಸಬೇಕಾಗುವುದಾದರೆ, ಕೆಲವರು ಪರಿಸ್ಥಿತಿಯ ಕಬ್ಬಿಣ ಹಿಡಿತದಲ್ಲಿ ಸಿಕ್ಕುಬಿದ್ದು ಬದುಕನ್ನು ಸವೆಯಿಸಬೇಕಾಗುತ್ತದೆ'[೧೩].

ಇಂದಿನ ಯಾಂತ್ರಿಕ ಜೀವನವು ಇದೇ ಪರಿಸ್ಥಿತಿಯನ್ನು ಹೊಂದಿದೆ. ಈ ಮೊದಲು ಪ್ರಸ್ತಾಪಿಸಿದಂತೆ ಮಗು ಹುಟ್ಟುವಾಗ ಬಂಧಮುಕ್ತವಾಗಿ ಹುಟ್ಟುತ್ತದೆ ಎಂದು ಹೇಳಿದ್ದಾರೆ. ಆದರೆ ಇಂದಿನ ದಿನಗಳಲ್ಲಿ ಮಗು ಹುಟ್ಟುವಾಗಲೇ ಬಹುಶಃ ಬಂಧಿತವಾಗಿಯೇ ಹುಟ್ಟುತ್ತದೆ ಎಂದೂ ಹೇಳಬಹುದು. ಇಂದಿನ ಒತ್ತಡದ ಜೀವನ ವಿಧಾನ ಈ ಮಟ್ಟಕ್ಕೆ ಆಲೋಚಿಸುತ್ತದೆ. ಇಡೀ ಜೀವನವನ್ನು ಇವತ್ತು ಯಾಂತ್ರಿಕವಾಗಿಯೇ ಮುನ್ನಡೆಸಬೇಕಾದಂತಹ ಪರಿಸ್ಥಿತಿ ಒದಗಿಬಂದಿದೆ. 'ಕೂಸು ಹುಟ್ಟುವ ಮುಂಚೆ ಕುಲಾಯಿ ನೋಡಿಸಿದಂತೆ' ಎಂಬ ಗಾದೆಯ ಮಾತಿನಂತೆ ಮಗುವು ಹುಟ್ಟುವ ಮುಂಚೆಯೇ ಅದರ ಬೆಳವಣಿಗೆಯ ಕನಸನ್ನು ಕಾಣುವ ಭರದಲ್ಲಿ ಅದರ ಸ್ವಾತಂತ್ರ್ಯದ ಬಗ್ಗೆ ಯೋಚಿಸದೆ ತಂದೆ ತಾಯಿಯರು ಅದನ್ನು ಬಂಧನದಲ್ಲಿರುವಂತೆ ಮಾಡುತ್ತಾರೆ. ಇಂತಹ ಸಂದರ್ಭದಲ್ಲಿ ಮಗು ಹುಟ್ಟುವಾಗಲೇ ಒಂದು ರೀತಿಯ ಬಂಧನದಿಂದಲೇ ಹುಟ್ಟುತ್ತದೆ ಎನ್ನಬೇಕಾಗುತ್ತದೆ. ಇನ್ನೂ ಮುಂದುವರೆದು ಹೇಳುವುದಾದರೆ ಅದರ ಲಾಲನೆ, ಪಾಲನೆಯಲ್ಲಿ ಆಗುತ್ತಿರುವ ವ್ಯತ್ಯಾಸದಿಂದಾಗಿ ಎಳೆಯದರಲ್ಲೆ ಒತ್ತಡಕ್ಕೆ ಸಿಲುಕಬೇಕಾಗಿದೆ. ತಾಯಿಯೊಂದಿಗೆ ಮುದ್ದಾಗಿ ಆಡಿ ಬೆಳೆಯಬೇಕಾಗಿರುವ ಸಮಯದಲ್ಲಿ ಬೇಬಿ ಸಿಟ್ಟಿಂಗ್ ಶಾಲೆಯಲ್ಲಿ ನಾಲ್ಕು ಗೋಡೆಗಳ

ಮಧ್ಯೆ ಬಂಧಿತವಾಗುತ್ತದೆ.

ತಂದೆ ತಾಯಂದಿರು ತಮ್ಮ ಉದ್ಯೋಗದ ಭರದ ಬದುಕಿನಲ್ಲಿ ಒತ್ತಡದ ಜೀವನಕ್ಕೆ ಅನಿವಾರ್ಯವಾಗಿ ಹೊಂದಿಕೊಳ್ಳಲೇ ಬೇಕಾಗಿದೆ. ಹಳ್ಳಿಯಲ್ಲಿನ ಕೃಷಿ ಜೀವನದಲ್ಲಿರುವ ಸುಖ, ಸಂತೋಷಗಳನ್ನು ದಿಕ್ಕರಿಸಿ ನಗರದಲ್ಲಿನ ಒತ್ತಡದ ಜೀವನಕ್ಕೆ ತೊಡಗಿಸಿಕೊಳ್ಳುತ್ತಿರುವುದು ಶೋಚನೀಯ ಸಂಗತಿಯಾಗಿದೆ.

'ಅಲಕೆಯನ್ನು ಮದುವೆ ಮಾಡಿಕೊಂಡ ಹುಡುಗ ಒಬ್ಬ ಬೇಸಾಯಗಾರನಾಗಿದ್ದ. ನೋಡುವುದಕ್ಕೆ ಚೆನ್ನಾಗಿದ್ದ. ಸಶಕ್ತ, ದುಡ್ಡಿದ್ದವನಾಗಿದ್ದ. ಆದರೆ ಜೂಜುಗಾರನಾಗಿದ್ದ. ಆದ್ದರಿಂದಾಗಿ ಆತನಿಗೆ ಬೇರೆ ಯಾವುದರ ಎಚ್ಚರವೂ ಉಳಿಯುತ್ತಿರಲಿಲ್ಲ.'[೧೪] ಆಕೆಯಂತೆ ಎಷ್ಟೋ ಹೆಣ್ಣುಗಳು ನೋವುಗಳನ್ನು ಅನುಭವಿಸುತ್ತಿದ್ದಾರೆ. ಇಂದಿನ ಯುವ ಜನತೆ ಹಲವಾರು ಚಟಗಳಿಗೆ ದಾಸರಾಗುತ್ತಿದ್ದಾರೆ, ಆಗಿದ್ದಾರೆ ಸಹ. ಮೋಜು, ಮಸ್ತಿಗಾಗಿ ಇಡೀ ಜೀವನವನ್ನು ಕೆಟ್ಟ ಚಟಗಳಿಗೆ ದಾಸರನ್ನಾಗಿ ಒಗ್ಗಿಸಿಕೊಳ್ಳುತ್ತಿದ್ದಾರೆ. ಇದರಿಂದಾಗಿ ಎಷ್ಟೋ ಕುಟುಂಬಗಳು ಒಡೆದು ಬೀದಿಪಾಲಾಗುತ್ತಿವೆ. ಕುಟುಂಬದಲ್ಲಿನ ಹೆಣ್ಣುಮಕ್ಕಳ ಜೀವನ ಹೇಳತೀರದಂತಹ ಸ್ಥಿತಿ ತಲುಪುತ್ತಿದೆ.

ಮಹಾಭಾರತದಲ್ಲಿ ನಡೆದಂತಹ ಜೂಜು ಇವತ್ತಿಗೂ ಬೇರೆ ಬೇರೆ ಆಯಾಮಗಳನ್ನು ಪಡೆದುಕೊಂಡು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಸಾಗುತ್ತಾ ಬರುತ್ತಿದೆ. ಪ್ರಸ್ತುತ ಸಂದರ್ಭದಲ್ಲಿ ಹೆಚ್ಚು ವಿದ್ಯಾವಂತ ವರ್ಗವು ಈ ಹಣದಾಸೆಗೆ ಬಲಿಯಾಗಿ ಜೂಜಿನತ್ತ ಸಾಗುತ್ತಿದ್ದಾರೆ. ಯುವ ಜನತೆ ಈ ದೇಶದ ಅಮೂಲ್ಯವಾದ ಆಸ್ತಿ ಎಂದು ಹೇಳಲಾಗುತ್ತಿದೆ. ಆದರೆ ಆ ಆಸ್ತಿ ತನ್ನ ದಾರಿಯನ್ನೇ ಬದಲಿಸಿಕೊಂಡು ಒಳ್ಳೆತನದ ಕೊಂಡಿಯಿಂದ ಕಳಚಿಕೊಳ್ಳುತ್ತಿರುವುದು ವಿಶಾದನೀಯ ಸಂಗತಿಯಾಗಿ ಉಳಿದುಬಿಟ್ಟಿದೆ.

ರಾಜಮಾತೆ ಅಲಕೆಗೆ ನೆಲಮಾಳಿಗೆಯಲ್ಲಿ ವಿಷ ಕುಡಿಸುವ ಕೃತ್ಯವೇ ನಡೆಯುತ್ತದೆ. ಇಂತಹ ಪ್ರಕರಣಗಳು ಇಂದಿನ ವಿದ್ಯಾವಂತ, ನಾಗರೀಕ ಸಮಾಜದಲ್ಲಿ ಕಡಿಮೆ ಆಗುತ್ತಿದೆ ಎಂಬ ಆಶಾವಾದವೆಲ್ಲವೂ ತಲೆಕೆಳಗಾಗಿದೆ. ಹಿಂದಿನಿಂದಲೂ ಈ ಶೋಷಣೆ ನಡೆದುಕೊಂಡು ಬಂದಿದೆ. ಆದರೆ ಅದು ಇಂದಿಗಾದರೂ ನಿಲ್ಲುತ್ತದೆ ಎಂಬುದು ಕನಸಿನ ಮಾತೇ ಸರಿ. ಅತ್ತೆ–ಸೊಸೆ, ಅತ್ತಿಗೆ–ನಾದಿನಿ ಇವರೊಂದಿಗಿನ ಸಂಬಂಧವು ಅವರ ಜೀವಿತಾವಧಿಯಲ್ಲಿ ಸಮಾನಾಗಿರುವುದೇ ಇಲ್ಲ.

ಅರಮನೆಯ ನೆಲಮಾಳಿಗೆಯಲ್ಲಿ ಮನುಷ್ಯರ ನೆಲಮಾಳಿಗೆಯೂ ಹೌದು. ಅಲ್ಲಿ ಆಕೆಯಂತವರ ಸಾವು ಎಷ್ಟೊಂದು ಸಲೀಸು. ಮುಖವಾಡದ ಬದುಕಿನ ಬೂಟಾಟಿಕೆ ಹಾಗೂ ಕ್ರೌರ್ಯವನ್ನು

ಇಲ್ಲಿ ಬೆತ್ತಲೆಗೊಳಿಸುತ್ತದೆ. ಈ ಮಾತನ್ನು ಕಾದಂಬರಿಯಲ್ಲಿ ಹೀಗೆ ನಿರೂಪಿಸಲಾಗಿದೆ. 'ಒಳಗೆ ಹೋಗು. ಆದರೆ ನೀನು ಅಲ್ಲಿ ಉಳಿಯುವುದು ಅರ್ಧ ಗಳಿಗೆ ಮಾತ್ರ, ಮನುಷ್ಯ ಸಾಯುವ ಮೊದಲಿನ ಅಪೇಕ್ಷೆಯನ್ನು ಪೂರೈಸಬೇಕು ಎಂದು ಹೇಳುತ್ತಾರೆ. ಅಷ್ಟಕ್ಕಾಗಿ ಅಲಕೆಯ ಮೇಲೆ ದಯೆ ತೋರಿದ್ದೇನೆ.'[೧೫]

ದ್ವೇಷ, ಅಸೂಯೆ ಎಂಬುದು ಎಷ್ಟು ಕ್ರೂರಿಯನ್ನಾಗಿಸುತ್ತದೆ ಎಂದರೆ ಒಬ್ಬರನ್ನು ನಾಶಮಾಡುವವರೆಗೂ ಸಾಗುತ್ತದೆ. ಇಲ್ಲಿಯೂ ಕೂಡ ಆದದ್ದು ಹೀಗೆಯೇ. ಅಲಕೆ ಒಬ್ಬ ಸಾಮಾನ್ಯ ಮತ್ತು ನಿಸ್ಸಾಹಾಯಕ ಹೆಣ್ಣು ಮಗಳು. ರಾಜ ಮಾತೆಯ ಸಂಚಿಗೆ ಸಿಲುಕಿ ತನ್ನ ಪ್ರಾಣವನ್ನೇ ಕಳೆದುಕೊಳ್ಳುತ್ತಾಳೆ. ಯಯಾತಿ ಅಲಕೆಯನ್ನು ತನ್ನ ತಂಗಿ ಎಂದು ಒಪ್ಪಿಕೊಂಡದ್ದಕ್ಕಾಗಿ ನಿಶ್ಪಾಪಿ ಅಲಕೆ ತನ್ನ ಪ್ರಾಣಾರ್ಪಣೆ ಮಾಡಬೇಕಾಯಿತು. ಜನಸಾಮಾನ್ಯರಿಗೆ ಸರಿಸಮಾನವಾಗಿ ಬದುಕುವ ಅವಕಾಶವಿಲ್ಲ. ಒಂದು ವೇಳೆ ಹಾಗೇನಾದರು ಸಮಾನವಾದ ಬದುಕನ್ನು ಆಸೆ ಪಟ್ಟಿದ್ದೇ ಆದರೆ ಇಡೀ ಜೀವನವನ್ನೇ ತ್ಯಾಗಮಾಡಬೇಕಾಗಬಹುದು.

ಮಾನವೀಯತೆ ಇಲ್ಲದೆ ಅಮಾನುಷವಾಗಿ ನಡೆದುಕೊಂಡಿದ್ದು ರಾಜಮಾತೆಯದು ಎಷ್ಟರ ಮಟ್ಟಿಗೆ ಸರಿ. ಬೇರೆಯವರ ಜೀವ ತೆಗೆಯಲು ಯಾವ ಅಧಿಕಾರ ಯಾರಿಗೂ ಇರುವುದಿಲ್ಲ. ಒಬ್ಬರಿಗೆ ಜೀವ ತೆಗೆಯುವಾಗ ಮತ್ತೆ ಅವರಿಗೆ ಜೀವ ಕೊಡುವ ಅಧಿಕಾರ ಇದ್ದರೆ ಮಾತ್ರ ತೆಗೆಯಬೇಕು. ಆದರೆ ಮನುಷ್ಯತ್ವವನ್ನೇ ಮರೆತ ಮಾನವರು ಯಾವ ಕೆಲಸ ಮಾಡಲೂ ಹೇಸುವುದಿಲ್ಲ ಎಂಬುದಕ್ಕೆ ಇದು ದೊಡ್ಡ ನಿದರ್ಶನವಾಗಿದೆ.

ಯಯಾತಿಯು ಅಲಕೆಯನ್ನು ತಂಗಿ ಎಂದು ಒಪ್ಪಿಕೊಂಡದ್ದು ರಾಜಮಾತೆಗೆ ಹಿಡಿಸಲಿಲ್ಲ ಸರಿ. ಆದರೆ ಅವಳ ಜೀವನದ ಜೊತೆ ಆಡವಾಡಿ ನಿರಪರಾಧಿಯಾದವಳನ್ನು ಅನ್ಯಾಯವಾಗಿ ಕೊಲೆ ಮಾಡಿದರೆ ಅದರಿಂದ ಸಂತೋಷಪಟ್ಟು ಸಾಧಿಸಿದ್ದಾದರೂ ಏನು? ಮಗನಿಗೆ ಪರೋಕ್ಷವಾಗಿ ತನ್ನ ಮೇಲೆಯೇ ಸೇಡು, ದ್ವೇಷವನ್ನು ಸಾಧಿಸಲು ನೆರವಾಗುತ್ತಾಳೆ ಅಷ್ಟೆ. ಕೊನೆಯಲ್ಲಿ ತನ್ನ ಸೊಸೆಯಿಂದ ಯಾವ ಸುಖ ಸಂತೋಷವನ್ನು ಪಡೆಯಲು ಅನರ್ಹಳಾಗಿದ್ದಾಳೆ.

ಸೇಡಿಗಾಗಿ ಮಾಡುವ ಯಾವುದೇ ಕಾರ್ಯ ವ್ಯಕ್ತಿಗಾಗಲಿ, ಇತರರಿಗಾಗಲಿ, ಸಮಾಜಕ್ಕಾಗಲಿ ಹಿತವನ್ನುಂಟುಮಾಡಲಾರದು. ಈ ಕಾದಂಬರಿಯಲ್ಲಿ ದೇವಯಾನಿಯ ಬದುಕು ಅದನ್ನು ತೋರಿಸುತ್ತದೆ. ಆದರೆ ದೇವಯಾನಿ ತನ್ನ ದುಃಖಕ್ಕೆ ತಾನೆ ಬಹುಮಟ್ಟಿಗೆ ಹೊಣೆಯಾದರೂ ಅದರಲ್ಲಿ ವಿಧಿಯ ಕೈವಾಡವೂ ಇದೆ ಎಂದೂ ಹೇಳಬಹುದು.

'ಮೊದಲ ಆಘಾತದಿಂದ ಜರ್ಝರಿತಳಾಗಿದ್ದ ದೇವಯಾನಿ ಕೊನೆಯವರೆಗೂ ಕೆಸರಲ್ಲಿ ಕಾಲಿಕ್ಕಿದಂತೆ ಪುರುಷನ ಪ್ರೀತಿಗಾಗಿ ಹಾತೊರೆದು ನಿಷ್ಕಲ್ಮಷ ಪ್ರೀತಿಗೆ ಒಗ್ಗದ ತನ್ನ ಸಹಜ ಒರಟು ಸ್ವಭಾವದ ಸಂಘರ್ಷದಲ್ಲಿ ಯಾತನೆ ಪಡುತ್ತಾಳೆ'[೧೬]. ಇದರ ಪರಿಣಾಮದಿಂದಾಗಿ ತನ್ನ ವರ್ತುಲದಲ್ಲಿ ಬಂದ ಯಯಾತಿ, ಶರ್ಮಿಷ್ಠೆ, ಕಚ, ಪುರು ಇವರ ಜೀವನದಲ್ಲೂ ಯಾತನೆಯನ್ನುಂಟು ಮಾಡುತ್ತಾಳೆ.

ದೇವಯಾನಿ ತಾನು ಕಂಡ ಕನಸಿನಿಂದ ಬೆಚ್ಚಿ ಎಚ್ಚರವಾಗುತ್ತಾಳೆ. ತನ್ನ ನಿರ್ಮಲವಾದ ಪ್ರೀತಿಯಿಂದ ವಂಚಿತಳಾಗಿದ್ದ ದೇವಯಾನಿ ಕನಸಲ್ಲೂ ಸಹ ಕೆಟ್ಟದ್ದನ್ನೆ ಕಾಣುತ್ತಾಳೆ. ಆದರೆ ಅವಳೇ ಹೇಳುವಂತೆ 'ದೇವಯಾನಿ ರಾಕ್ಷಸ ಗುರುಗಳ ಮಗಳು ಆದರೆ ಆಕೆ ರಾಕ್ಷಸಿಯಲ್ಲ'[೧೭]. ದೇವಯಾನಿ ತನ್ನಿಂದ ತಾನೆ ಕೆಟ್ಟವಳಾಗಿಲ್ಲ. ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಆಕೆ ತನ್ನ ವರ್ತನೆಯಲ್ಲಿ ಒರಟಾಗಿದ್ದಾಳೆ ಎಂಬುದು ಈ ಮೇಲಿನ ಸಾಲುಗಳಿಂದ ತಿಳಿಯುತ್ತದೆ. ಪ್ರತೀ ವ್ಯಕ್ತಿಯೂ ಸಹ ಸಮಯ, ಸಂದರ್ಭ ಬಂದಾಗ ಬದಲಾಗಲೇ ಬೇಕಾಗುತ್ತದೆ. ಸಮಾಜದಲ್ಲಿನ ಕೆಲವು ಪರಿಸ್ಥಿತಿಗಳ ಒತ್ತಡ ಹಾಗೆ ಮಾಡಿಸಿಬಿಡಲೂಬಹುದು. ಅದು ಅನಿವಾರ್ಯವೂ ಆಗಿರಬಹುದು. ಇಂತಹ ಸಂದರ್ಭದಲ್ಲಿ ತಾಳ್ಮೆ, ಸಹನೆ ಎಲ್ಲವನ್ನೂ ಕಳೆದುಕೊಳ್ಳುತ್ತಾರೆ. ಇದರಿಂದಾಗಿ ತಾನು ಏನು ಮಾಡುತ್ತಿದ್ದೇನೆ ಎಂಬ ಅರಿವು ಸಹ ಇರುವುದಿಲ್ಲ. ಕೊನೆಗೆ ಎಲ್ಲರಿಂದಲೂ ದೂರವಾಗುವ ಸಾಧ್ಯತೆಗಳೇ ಹೆಚ್ಚು. ಆದರೆ ದೇವಯಾನಿ ಕೇವಲ ಸಂದರ್ಭಕ್ಕೆ ಸಿಲುಕಿ ಸೇಡು ತೀರಿಸಿಕೊಳ್ಳೋದಿಲ್ಲ. ತನ್ನ ಹಠವನ್ನೇ ಕೊನೆಯವರೆಗೆ ಸಾಧಿಸುತ್ತಾಳೆ. ತನ್ನ ಸಾಂಸಾರಿಕ ಜೀವನವನ್ನೂ ತನ್ನ ಹಠದಿಂದಾಗಿಯೇ ನರಕದ ಕೂಪಕ್ಕೆ ತಳ್ಳಿಕೊಳ್ಳುತ್ತಾಳೆ. 'ಈಗ ಇಂದ್ರ ಆತ ಬಯಸಿದ ಅಪ್ಸರೆಯನ್ನು ಆತನಿಗೆ ಒಪ್ಪಿಸಬಹುದು. ಹಾಗಿರುವಾಗ ಆತನಿಗೆ ದೇವಯಾನಿಯ ನೆನಪು ಯಾತಕ್ಕೆ ಬರಬೇಕು? ಗಂಡಸರು ಯಾವಾಗಲೂ ಹೀಗೆಯೇ ಕೃತಘ್ನರು, ಕಪಟಿಗಳು, ಕಠೋರರು, ಕಲ್ಲು ಹೃದಯದವರು. ಬಲೆಯನ್ನೇ ಎತ್ತಿಕೊಂಡು ಹಾರಿಹೋಗುವ ಹಕ್ಕಿಯಂತೆ ಅವರು ಲೀಲಾಜಾಲವಾಗಿ ಹೊರಟು ಹೋಗುತ್ತಾರೆ! ಹೆಂಗಸರು ಮಾತ್ರ ಅದೃಶ್ಯವಾದ ಪ್ರೀತಿ ಪಾಶದಲ್ಲಿ ತಮ್ಮ ಹೃದಯಗಳನ್ನು ತೊಡಕಿಸಿಕೊಂಡು ಅಳುತ್ತ ಕುಳಿತಿರುತ್ತಾರೆ.'[೧೮]

ಈ ಮೇಲಿನ ಉಲ್ಲೇಖವನ್ನು ಗಮನಿಸಿದಾಗ ದೇವಯಾನಿಯ ಮೂಲಕವಾಗಿ ಪ್ರೀತಿಯಲ್ಲಿ ಸಿಲುಕಿದವರ ತೊಳಲಾಟ ಮತ್ತು ಅವರ ಮನಃಸ್ಥಿತಿಗಳು ಹೇಗಿರುತ್ತವೆ ಎಂಬುದನ್ನು ಹಾಗೆಯೇ ಹೆಣ್ಣಿನ ಚಂಚಲ ಮನಃಸ್ಥಿತಿಯನ್ನು ಚಿತ್ರಿಸಲಾಗಿದೆ. ಹಾಗೆಯೆ ಇದರಿಂದ ನೋವುಂಡ ಎಷ್ಟೋ ಹೆಣ್ಣುಗಳು ದಿಟ್ಟೆಯರಾಗಿ ಮನ ಕುಗ್ಗದೆ ಮುನ್ನಡೆದು ಜೀವನದಲ್ಲಿ ಯಶಸ್ಸನ್ನು ಪಡೆಯುತ್ತಾರೆ.

ಆದರೆ ಇನ್ನೂ ಕೆಲವರು ಅದೇ ಕೊರಗನ್ನು ಇಟ್ಟುಕೊಂಡು ಜೀವನವನ್ನು ನರಕ ಎಂಬಂತೆ ಕಾಣುತ್ತಾರೆ. ಆದರೆ ದೇವಯಾನಿಯಾದರೋ ಮೊದಲನೆಯ ಅಂಶಕ್ಕೆ ಸೇರಿದವಳಾಗಿದ್ದಾಳೆ. ಹಠಮಾರಿ ಹೆಣ್ಣಾಗಿ ತನ್ನ ಸೇಡಿನ ಜ್ವಾಲೆಯನ್ನು ಮುಂದುವರಿಸುತ್ತಾಳೆ. ಇದರಿಂದಾಗಿ ಎಲ್ಲರ ಜೀವನದಲ್ಲಿಯೂ ದೇವಯಾನಿ ಒಂದು ರೀತಿಯಲ್ಲಿ ಖಳನಾಯಕಿಯಾಗಿ ಚಿತ್ರಿತವಾಗಿದ್ದಾಳೆ.

ದೇವಯಾನಿ ಮತ್ತು ಶರ್ಮಿಷ್ಠೆಯರ ನಡುವೆ ನಡೆಯುವ ಸಂಘರ್ಷವು ಜಾತಿಯತೆ ಮತ್ತು ಸೌಂದರ್ಯದ ನಡುವೆ ನಡೆಯುವ ಸಂಘರ್ಷವಾಗಿದೆ ಎಂದು ಗುರುತಿಸಬಹುದು. ಇಲ್ಲಿ ಮೇಲು-ಕೀಳು ಎಂಬ ಭೇದ ಭಾವವು ಇವರ ಸಂಭಾಷಣೆಯಿಂದ ಅನಾವರಣಗೊಳ್ಳುತ್ತದೆ. 'ಗೊತ್ತಿದೆ, ಗೊತ್ತಿರದೆ ಏನು? ವೃಷಪರ್ವ ಮಹಾರಾಜನನ್ನು ಆಶ್ರಯಿಸಿಕೊಂಡಿದ್ದ ಒಬ್ಬ ಬಡ ಬ್ರಾಹ್ಮಣನ ಮಗಳು ನೀನು!'[೧೯] 'ಹೂಗಳಿಂದ ಬರೀ ಸಿಂಗರಿಸುವುದಕ್ಕೆಂದು ಆದಿಶಕ್ತಿ ನನಗೆ ಇಂತಹ ಅಲೌಕಿಕ ಸೌಂದರ್ಯವನ್ನು ಕೊಟ್ಟಿತೆ? ಶರ್ಮಿಷ್ಠೆಯಂತಹ ಲಾವಣ್ಯವತಿಯಾದ ರಾಜಕನ್ಯೆ ನನ್ನ ವಿಷಯದಲ್ಲಿ ಅಸೂಯೆ ಪಡುತ್ತಿರುವುದು ಸುಮ್ಮನೆಯೇ?'[೨೦].

ಇಲ್ಲಿ ದೇವಯಾನಿ ನಾನು ಬ್ರಾಹ್ಮಣಿ ಎಲ್ಲರಿಗಿಂತ ಶ್ರೇಷ್ಠವಾದವಳು. ನಾನೇ ಅತೀ ಸುಂದರಿ, ನನ್ನ ಬಿಟ್ಟರೆ ಯಾರೂ ಸಹ ಸುಂದರಿಯರಿರಬಾರದು ಎಂಬ ಅಹಂಕಾರವನ್ನು ಕಾಣುತ್ತೇವೆ. ಆದರೆ ಒಳಹೊಕ್ಕು ನೋಡಿದರೆ ಅದರ ಒಳ ಅರ್ಥವೇ ಬೇರೆಯಾಗಿದೆ. ಬ್ರಾಹ್ಮಣ ಮತ್ತು ಕ್ಷತ್ರಿಯರ ನಡುವೆ ನಡೆಯುವ ಸಂಘರ್ಷವನ್ನು ಇಲ್ಲಿ ಕಾಣುತ್ತೇವೆ.

ಇನ್ನು ಸೌಂದರ್ಯದ ನಡುವೆ ನಡೆಯುವ ಸಂಘರ್ಷವನ್ನು ಗಮನಿಸುವುದಾದರೆ, ಬ್ರಾಹ್ಮಣರಷ್ಟೇ ಸುಂದರಿಯರು, ಮೇಲ್ಜಾತಿಯವರಷ್ಟೇ ಶ್ರೇಷ್ಠ ಎಂಬ ನಂಬಿಕೆ ಇರುವುದರಿಂದ ಈ ಸೌಂದರ್ಯ ಎಂಬುದು ಅವರಿಗಷ್ಟೇ ಸೀಮಿತವಾಗಿರಬೇಕೆಂಬುದು ಇಲ್ಲಿ ದೇವಯಾನಿಯ ವಾದ. ಇನ್ನೂ ಮುಂದುವರಿದು ಹೇಳುವುದಾದರೆ ಇಂದು ಬಿಳಿ ಬಣ್ಣವಷ್ಟೇ ಶ್ರೇಷ್ಠ, ಕಪ್ಪು ಬಣ್ಣ ಕೀಳು ಎಂಬ ಭಾವನೆಯನ್ನು ಎಲ್ಲರ ಮನಸ್ಸನ್ನು ಆವರಿಸುವಂತೆ ಮಾಡಲಾಗುತ್ತಿದೆ.

ಯಯಾತಿ ಕಾದಂಬರಿಯಲ್ಲಿ ವರ್ಣಸಂಕರ ವ್ಯವಸ್ಥೆಯನ್ನು ಕಾಣುತ್ತೇವೆ. ಇದನ್ನು ಕಾದಂಬರಿಯ ಸಾಲುಗಳಲ್ಲೇ ಹೇಳುವುದಾದರೆ 'ಇನ್ನೂ ಹೀಗೆ ನೀವು ನನ್ನ ಕೈಯನ್ನು ಬಿಡಲಾಗುವುದಿಲ್ಲ. ನನ್ನ ಪಾಣಿಗ್ರಹಣ ಮಾಡಿದ್ದೀರಿ! ಅದು ಹೇಗೆ ಸಾಧ್ಯ? ನೀನು ಬ್ರಾಹ್ಮಣ ಕನ್ಯೆ. ನಾನು ಕ್ಷತ್ರಿಯ ರಾಜಕುಮಾರ'[೨೧]. ಮದುವೆಗಳು ಆಯಾ ಜಾತಿಗಳ ಒಳಗೇ ಮಾತ್ರ ನಡೆಯುತ್ತಿವೆ. ಅಲ್ಲಿ ಅದರದ್ದೇ ಆದ ಕಟ್ಟುಪಾಡುಗಳು, ಆಚರಣೆ, ಸಂಪ್ರದಾಯಗಳು ಇರುತ್ತವೆ. ಅದನ್ನು ಮುರಿದು

ಬೇರೊಂದು ಜಾತಿಯವರನ್ನು ಮದುವೆ ಆದರೆ ಆ ಜಾತಿಗೆ ಅವಮಾನ ಮತ್ತು ಅಪಚಾರವೆಸಗಿದಂತೆ. ಇಲ್ಲಿ ಬ್ರಾಹ್ಮಣ ಜಾತಿ ತುಂಬಾ ಶ್ರೇಷ್ಠವಾದದ್ದು. ಇವರು ದೇವರಿಗೆ ಸರಿಸಮಾನರು ಎಂದು ನಂಬಿಸಲಾಗಿದ್ದರಿಂದಾಗಿ ಇವರನ್ನು ಬೇರೊಬ್ಬ ಜಾತಿಯವರು ಮದುವೆ ಮಾಡಿಕೊಳ್ಳುವುದು ಅಪರಾಧ. ಒಂದು ವೇಳೆ ಆಂತಹವರನ್ನು ಜಾತಿ ಹೀನರು ಎಂದು ಹೊರ ಹಾಕಲಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿಯೂ ಸಹ ಇದೇ ಮುಂದುವರೆದಿದೆ.

'ಸರಳ, ಸುಂದರ, ಮುಗ್ದ ಹೃದಯದ ಶರ್ಮಿಷ್ಠೆಯು ಸಿಟ್ಟಿನ ಆವೇಷಕ್ಕೆ ಸಿಲುಕಿ ದೇವಯಾನಿಯನ್ನು ನಿಂದಿಸಿದ್ದಕ್ಕಾಗಿ ಅವಳು ಇಡೀ ಜೀವನವೆಲ್ಲ ಕಣ್ಣೀರಿನಲ್ಲೆ ಸಾಗಿಸಬೇಕಾಯಿತು. ಶರ್ಮಿಷ್ಠೆಯ ಇಡೀ ಜೀವನ ದೇವಯಾನಿ ಎಂಬ ಅಡಕತ್ತರಿಗೆ ಸಿಲುಕಿಕೊಂಡು ನರಳಬೇಕಾಯಿತು. ಮಾನವೀಯತೆಯೇ ಇಲ್ಲದವಳಾಗುತ್ತಾಳೆ ದೇವಯಾನಿ. ಇದಕ್ಕೆ ಸಂಬಂಧಿಸಿದಂತೆ ದೇವಯಾನಿ ಮತ್ತು ಶರ್ಮಿಷ್ಠೆಯರಲ್ಲಿದ್ದ ಸ್ನೇಹಕ್ಕೆ ಯಾವುದೇ ಸಂಬಂಧವೂ ಇಲ್ಲದಾಗುತ್ತದೆ. ಸ್ನೇಹಿತೆ ಎಂಬುದನ್ನು ಮರೆತ ದೇವಯಾನಿಗೆ ತನ್ನ ಹಠವೇ ಅವಳಿಗೆ ಮುಖ್ಯವಾಗುತ್ತದೆ. ಆದರೆ ದೇವಯಾನಿ ಸಿಟ್ಟಿನ ಭರದಲ್ಲಿ 'ಶರ್ಮಿಷ್ಠೆ ತನ್ನ ಸೆರಗಿನಲ್ಲಿ ಕೆಂಡವನ್ನು ಒಯ್ಯುತ್ತಿದ್ದಳೆಂಬ ಭಾವನೆಯಾಗಲೀ, ಮುಂದಾಲೋಚನೆಯಾಗಲೀ ದೇವಯಾನಿಗೆ ಬರದೇ ಹೋದದ್ದು ದುರ್ದೈವ'[೧೨].

ಮನುಷ್ಯನು ಸಿಟ್ಟಿನಲ್ಲಿ ತಾನೇನು ಮಾಡುತ್ತೇನೆ, ಅದರಿಂದ ಮುಂದೇನಾಗಬಹುದು ಎಂಬ ಕಲ್ಪನೆ ಇರದೇ ಪಶುವಿನಂತೆ ವರ್ತಿಸುತ್ತಾನೆ. ಇದಕ್ಕೆ ಶರ್ಮಿಷ್ಠೆ ತನಗೆ ತಾನೆ ಹೇಳಿಕೊಂಡ ಮಾತುಗಳು ಇಂತಿವೆ. 'ಕೋಪಾವೇಶಕ್ಕೆ ಒಳಗಾದ ಮನುಷ್ಯ ಕ್ರೂರನಾಗುತ್ತಾನೆ. ಪಶುವಾಗುತ್ತಾನೆ!'[೧೩]. ಇದಕ್ಕೆ ಗತಕಾಲದಿಂದಲೂ ಉದಾಹರಣೆಗಳು ಸಿಗುತ್ತವೆ. ರಾಮಾಯಣದಲ್ಲಿ ಮಂಥರೆ ಇಲ್ಲದಿದ್ದಿದ್ದರೆ ಬಹುಶಃ ರಾಮಾಯಣ ನಡೆಯುತ್ತಿರಲಿಲ್ಲವೇನೋ? ಮಂಥರೆಯ ಸೇಡಿನಿಂದಾಗಿ ಕೈಕೆಯನ್ನು ತನ್ನ ಕೈಗೊಂಬೆಯನ್ನಾಗಿಸಿಕೊಂಡ ಮಂಥರೆ ಇಡೀ ರಾಮಾಯಣ ನಡೆಯಲು ಕಾರಣವಾಗಿದ್ದಾಳೆ. ಹಾಗೆಯೇ ಇಲ್ಲಿ ಶರ್ಮಿಷ್ಠೆಯ ಒಂದು ಸರಳ ಕೋಪಕ್ಕೆ ಇಡೀ ಜೀವನವೆಲ್ಲ ನರಕಯಾತನೆಗೆ ಒಳಗುಮಾಡಿಕೊಳ್ಳುತ್ತಾಳೆ. ಆದರೆ ಕಚನ ಮಾತುಗಳು ಶರ್ಮಿಷ್ಠೆಗೆ ಬದುಕುವ ಮತ್ತು ಬಂದ ಪರಿಸ್ಥಿತಿಯನ್ನು ಎದುರಿಸಿ ಗೆಲ್ಲುವ ಸಂಜೀವಿನಿಯಾಗುತ್ತದೆ.

'ದೂರದಿಂದ ಭಯಂಕರವಾಗಿ ಕಂಡದ್ದು ನಿಜವಾಗಿಯೂ ಅಷ್ಟು ಭಯಂಕರವಾಗಿರುವುದಿಲ್ಲ. ಮರಣವಾದರೂ ಹಾಗೆಯೇ ನಾನು ಹೇಳುತ್ತಿರುವುದು ಅನುಭವದ ಮಾತನ್ನು ರಾಜ ಕನ್ಯೆ'[೧೪] ಎಂದಿದ್ದ ಈ ಮಾತುಗಳು ಕೇವಲ ಶರ್ಮಿಷ್ಠೆಯ ಜೀವನಕ್ಕೆ ಮಾತ್ರ ಅನ್ವಯವಾಗದೆ, ಎಲ್ಲಾ ಮನುಷ್ಯ ಜೀವಿಗಳಿಗೆ ಇದು ಅರ್ಥವಾದರೆ ಎಲ್ಲರಿಗೂ ಸಂಜೀವಿನಿಯಾಗುತ್ತದೆ.

ಕಚನ ಒಂದೊಂದು ಮಾತುಗಳು ಸಹ ಬಹಳ ಅರ್ಥಪೂರ್ಣವಾದಂತಹವುಗಳಾಗಿವೆ. ನಿಷ್ಕಾಮ, ನಿರಪೇಕ್ಷ ಪ್ರೀತಿಗೆ ಪರಿವರ್ತಿಸುವ ಶಕ್ತಿಯಿರುತ್ತದೆ. ಅದಕ್ಕೆ ಕಚ ಉದಾಹರಣೆಯಾಗುತ್ತಾನೆ. ಪ್ರೀತಿಸುವುದನ್ನು ಕಲಿಸುವ ಗುರು ಕಚ. ಲೋಕ ಹಿತಕ್ಕೆ ಕಾರಣನಾಗುತ್ತಾನೆ. 'ಬದುಕಿನಲ್ಲಿ ಪ್ರೀತಿ ಒಂದು ಉಚ್ಚವಾದ ಭಾವನೆ ಹೌದು; ಆದರೆ ಕರ್ತವ್ಯ ಅದಕ್ಕಿಂತಲೂ ಉಚ್ಚವಾದದ್ದು. ಕರ್ತವ್ಯವೇ ಧರ್ಮಕ್ಕೆ ಆಧಾರ'[೨೫]. ಪ್ರೀತಿಯ ಭಾವನೆ ಎಷ್ಟು ಮುಖ್ಯವೋ ಅದಕ್ಕಿಂತ ಮುಖ್ಯವಾಗಿದ್ದದ್ದು ಕರ್ತವ್ಯ. ನಿಸ್ವಾರ್ಥ ಪ್ರೀತಿಯಲ್ಲಿ ಈ ಕರ್ತವ್ಯಕ್ಕೆ ಮೊದಲ ಆದ್ಯತೆಯನ್ನು ಕಚ ನೀಡುತ್ತಾನೆ. ನಾನು ಎಂಬುದನ್ನು ತೊಡೆದು ಹಾಕಿ ನಾವೆಲ್ಲರೂ ಒಂದೇ ಎಂಬ ಭಾವನೆ ಇದ್ದಾಗ ಮಾತ್ರ ಇದು ಸಾಧ್ಯವಾಗುತ್ತದೆ. ಆದರೆ ಕಚನ ಮಾತಿಗೆ ತದ್ವಿರುದ್ದತೆ ಇರುವುದು ಕಾಣುತ್ತದೆ. ನಿಸ್ವಾರ್ಥ ಪ್ರೀತಿಯ ಬದಲಾಗಿ ಸ್ವಾರ್ಥತೆಯ ಪ್ರೀತಿ ಹೆಚ್ಚು. ಕರ್ತವ್ಯವನ್ನು ನಿಷ್ಠೆಯಿಂದಲ್ಲದೆ ಲೋಪವೆಸಗುವುದೇ ಹೆಚ್ಚು.

ಆರಂಭದ ಕಾಲದಲ್ಲಿ ಸ್ತ್ರೀಪ್ರಧಾನ ಕುಟುಂಬವಾಗಿತ್ತು. ಆದರೆ ಕಾಲ ಸರಿದಂತೆ ಗಂಡು ಹೆಣ್ಣಿನ ಮೇಲೆ ತನ್ನ ಅಧಿಪತ್ಯವನ್ನು ಸಾಧಿಸಲು ಪ್ರಾರಂಭಿಸಿದ. ಅಲ್ಲಿಂದ ಇಲ್ಲಿಯವರೆಗೂ ಹೆಣ್ಣು ಶೋಷಣೆಗೆ ಒಳಗಾಗುತ್ತಲೇ ಬಂದಿದ್ದಾಳೆ. ಅದನ್ನು ಈ ಕಾದಂಬರಿಯಲ್ಲಿಯೂ ಕಾಣಬಹುದು. 'ಮಹಾರಾಣಿಯಾಗಿದ್ದರೂ ನಾನೊಬ್ಬ ಮಹಾದಾಸಿಯಾಗಿದ್ದೆ!'[೨೬]. ವೈಭೋಗದಿಂದ ಕೂಡಿದಂತಹ ಅರಮನೆಯಲ್ಲಿ ಹೆಣ್ಣಿಗಿದ್ದಂತಹ ಸ್ಥಾನಮಾನ, ಅವಳ ವ್ಯಕ್ತಿತ್ವಕ್ಕಿದ್ದ ಮಾನ್ಯತೆ, ಭಾವನೆಗಳಿಗಿದ್ದ ಬೆಲೆ ಎಂತಹದ್ದು ಎಂಬುದು ತಿಳಿಯುತ್ತದೆ. ಕೇವಲ ರಾಜಮಾತೆಯಲ್ಲದೆ ಅಲ್ಲಿದ್ದ ಅಲಕ, ಕಲಿಕಾ, ಮುಕುಲಿಕೆ, ಶರ್ಮಿಷ್ಠೆ, ದೇವಯಾನಿ, ಮಾಧವಿ, ತಾರಕೆ ಎಲ್ಲರ ಜೀವನದ ಒಳಹೊರಗನ್ನು ಇಲ್ಲಿ ಪ್ರಶ್ನಿಸುವಂತೆ ಮಾಡಿದೆ.

ತಾಯಂದಿರು ಏನೇ ಮಾಡಿದರೂ ಸಹ ಅದನ್ನು ತಮ್ಮ ಮಕ್ಕಳ ಶ್ರೇಯಸ್ಸಿಗಾಗಿಯೇ ಮಾಡುತ್ತಾರೆ. ತಮ್ಮ ಜೀವನವನ್ನು ಒತ್ತೆಯಿಟ್ಟು ತಮ್ಮ ಮಕ್ಕಳನ್ನು ತಂಬಾ ಎಚ್ಚರ ವಹಿಸಿ ಅತ್ಯಂತ ಕಾಳಜಿಯಿಂದ ಬೆಳೆಸುತ್ತಾರೆ. ಇದಕ್ಕೆ ನಿದರ್ಶನವೆಂಬಂತೆ ಕಾದಂಬರಿಯಲ್ಲಿ ಶರ್ಮಿಷ್ಠೆಯು ಪುರುವಿಗಾಗಿ ತಾನು ಪಡುವ ಸಂಕಷ್ಟಗಳೇ ಸಾಕ್ಷಿ ಎನಿಸಿವೆ. 'ಈ ನನ್ನ ಮುದ್ದು ಮರಿಯ ಒಂದು ಕೂದಲೆಳೆಗೂ ಧಕ್ಕೆ ತಗಲಕೂಡದು! ನಾನು ಈ ಪುರುವಿಗಾಗಿ ಬದುಕಬೇಕಾಗಿದೆ. ಎಂತಹ ಕಷ್ಟಗಳು ಬಂದರೂ ಆತ ಬೆಳೆದು ದೊಡ್ಡವನಾಗುವವರೆಗೆ ನಾನು ಬದುಕಲೇಬೇಕಾಗಿದೆ. ಅದುವರೆಗೆ ಹಾಲಾಹಲದ ಸಮುದ್ರಗಳನ್ನೇ ಕುಡಿಯಬೇಕಾಗಬಹುದು. ಸಂಕಟದ ಮೇರು ಮಂದಾರಗಳನ್ನು ದಾಟಬೇಕಾಗಬಹುದು!'[೨೭]. ಸಮಾಜದಲ್ಲಿ ಕೆಟ್ಟ ಜನರು ಇದ್ದರೂ ಕೆಟ್ಟ ತಾಯಿ ಇರಲಾರಳು

ಎಂಬ ಮಾತು ಅಕ್ಷರಶಃ ಸತ್ಯ. ತನ್ನ ಜೀವನದ ಕೊನೆಯ ಕ್ಷಣಗಳವರೆಗೂ ಆಕೆ ಮಕ್ಕಳಿಗೆ ಒಳ್ಳೆಯದನ್ನೇ ಬಯಸುತ್ತಿರುತ್ತಾಳೆ. ತಾನು ಎಷ್ಟೇ ದುಷ್ಟಳಾಗಿದ್ದರೂ ಸಹ ಮಕ್ಕಳ ವಿಷಯದಲ್ಲಿ ಆಕೆ ಮೃದು ಸ್ವಭಾವದವಳೇ ಆಗಿರುತ್ತಾಳೆ. ಆದರೆ ಅದೇ ತಾಯಿಯು ತನ್ನ ಸೊಸೆಯ ವಿಷಯದಲ್ಲಿ ಯಾಕೆ ಕಠೋರವಾಗಿ ನಡೆದುಕೊಳ್ಳುತ್ತಾಳೆ ಎಂಬುದೇ ಒಂದು ಪ್ರಶ್ನೆಯಾಗಿ ಉಳಿಯುತ್ತದೆ. ಅದೇನೇ ಇರಲಿ ತಾಯಿ ಎಂದಿದ್ದರೂ ಆಕೆ ಸಹೃದಯಿಯೇ ಎಂಬುದರಲ್ಲಿ ಅನುಮಾನವೇ ಇಲ್ಲ.

ಸಂಸಾರದೊಳಗಿನ ಒಡಕುಗಳಿಂದಾಗಿ ಮುಂದೆ ಆಗಬಹುದಾದಂತ ಚಿತ್ರಣವನ್ನು ಯಯಾತಿ ದೇವಯಾನಿಯರ ಸಾಂಸಾರಿಕ ವಿರಹವನ್ನು ನೋಡಬಹುದು. ದೇವಯಾನಿಯ ಹಠ, ಸೇಡಿನ ಸಲುವಾಗಿ ಯಯಾತಿ ಪ್ರೀತಿಯ ಶೋಧವನ್ನು ಮಾಡುತ್ತಾ ತನ್ನ ಸಂಸಾರದ ಬಗೆಗೆ ವಿರಸವನ್ನು ತಾಳುತ್ತಾಳೆ ಮತ್ತು ತನ್ನ ತೃಪ್ತಿಗಾಗಿ ಮದಿರೆ, ಮದಿರಾಕ್ಷಿಗೆ ಬೇರೆ ಹೆಣ್ಣುಮಕ್ಕಳ ಜೀವನದಲ್ಲಿ ಆಟವಾಡಿ ಆ ಹೆಣ್ಣುಗಳ ಬಾಳನ್ನು ಕತ್ತಲಾಗಿಸುತ್ತಾನೆ. ಇತ್ತ ದೇವಯಾನಿ ಸಂಸಾರಿಯಾಗಿದ್ದೂ ಕೂಡ ಸಂನ್ಯಾಸಿನಿಯಂತೆ ಜೀವನ ಸಾಗಿಸುತ್ತಾಳೆ. ಮದ್ಯದ ದಾಸರಾಗಿ ಇಂದು ಗಂಡಸರು ತಮ್ಮ ಕುಟುಂಬದ ಕಲಹಕ್ಕೆ ಕಾರಣರಾಗಿದ್ದಾರೆ ತಮ್ಮ ಪತ್ನಿ ಮಕ್ಕಳನ್ನು ಕಷ್ಟಗಳಿಗೆ ಈಡುಮಾಡಿ, ತಾವು ನಿಶ್ಚಿಂತರಾಗಿ ಉಳಿದುಬಿಡುತ್ತಾರೆ.

ದೇವದಾನವರ ಯುದ್ಧವನ್ನು ಇದಕ್ಕೆ ಹೋಲಿಸಬಹುದಾಗಿದೆ. ಈ ಇಬ್ಬರ ಸಂಘರ್ಷವನ್ನು ಕಚ ಹೀಗೆ ಹೇಳುತ್ತಾನೆ. 'ದೇವತೆಗಳೆಲ್ಲರೂ ವಿಲಾಸದ ಅಂಧ ಉಪಾಸಕರು, ದೈತ್ಯರೆಲ್ಲರೂ ಶಕ್ತಿಯ ಅಂಧ ಉಪಾಸಕರು. ಈ ಇಬ್ಬರೂ ಲೋಕವನ್ನು ಸುಖವಾಗಿರಿಸಲಾರರು. ಅವರ ನಡುವಿನ ಯುದ್ಧದಿಂದ ಯಾವುದೊಂದು ನಿಷ್ಪನ್ನವಾಗಲಾರದು'[೨೮]. ಈ ಇಬ್ಬರೂ ಕೂಡ ತಮ್ಮ ಪ್ರತಿಷ್ಠೆಗಾಗಿ ನಾನು ಮೇಲು ತಾನು ಮೇಲು ಎಂಬ ಒಣ ಪ್ರತಿಷ್ಠೆಯಿಂದಾಗಿ ಯುದ್ಧವನ್ನು ಮಾಡುತ್ತಾರಾದರೆ ಅದರ ಪರಿಣಾಮ ಕೇವಲ ಯುದ್ಧ ಮಾಡಿದವರಿಗಷ್ಟೇ ಆಗಲಾರದೆ ಉಳಿದ ಅಮಾಯಕರನ್ನು ಸಹ ತಮ್ಮ ಜೊತೆಗೆ ಬಲಿತೆಗೆದುಕೊಳ್ಳುತ್ತದೆ. ಇದರ ಅರಿವಿಲ್ಲದೆ ವಿಜಯವನ್ನು ಸಾಧಿಸಬೇಕೆಂಬ ಕುರುಡುತನದಿಂದ ನಡೆದುಕೊಳ್ಳುತ್ತಾರೆ.

ಯಯಾತಿ ತನ್ನ ದೌರ್ಬಲ್ಯದಿಂದ ಪ್ರೀತಿಯನ್ನು ಶೋಧಿಸುವ ಆಸೆಯಿಂದಾಗಿ ತಾನು ಇನ್ನಷ್ಟು ಪಾತಾಳಕ್ಕೆ ಜಾರುತ್ತಾನೆ. ಅವನ ಎಲ್ಲಾ ದೌರ್ಬಲ್ಯಗಳನ್ನು ಮುಕುಲಿಕೆ ಮತ್ತು ಮಂದಾರ ಇಬ್ಬರೂ ಉಪಯೋಗಿಸಿಕೊಳ್ಳುತ್ತಾರೆ. ಮಂದಾರ ಗುರು ಮಹಾರಾಜನಾಗಿ 'ಮದಿರೆ ಮತ್ತು ಮದಿರಾಕ್ಷಿಯ ದಾಸನನ್ನಾಗಿಸುತ್ತಾನೆ ಮತ್ತು ಯಯಾತಿಯನ್ನು ಇನ್ನಷ್ಟು ಪಾಪಕೂಪಕ್ಕೆ ತಳ್ಳುತ್ತಾನೆ. 'ಮಹಾರಾಜರೆ ಇದು ಮೃತ್ಯುಲೋಕ. ಮನುಷ್ಯನ ಬದುಕು ನೂರು ದುಃಖಗಳಿಂದ ತುಂಬಿದೆ. ಆ

ದುಃಖಗಳನ್ನು ಮರೆಯುವುದಕ್ಕೆ ಈ ಮೃತ್ಯುಲೋಕದಲ್ಲಿರುವ ದಿವ್ಯೌಷಧಗಳೆಂದರೆ ಎರಡೇ ಎರಡು! ಅವು ಮದಿರೆ ಮತ್ತು ಮದಿರಾಕ್ಷಿ. ನನ್ನ ಭಕ್ತರಿಗೆ ನಾನು ಮದ್ಯವನ್ನೇ ಕೊಡುತ್ತೇನೆ'[೨೯].

ಮುಕುಲಿಕೆ ಒಂದು ಸಂದರ್ಭದಲ್ಲಿ ಯಯಾತಿಗೆ ಪ್ರೀತಿಯನ್ನು ಕೊಟ್ಟವಳಾಗಿದ್ದಾಳೆ. ಅದೇ ಮುಕುಲಿಕೆ ಇಂದು ಯಯಾತಿಯನ್ನು ತನ್ನ ಕೆಲಸಕ್ಕೆ ಬಂಡವಾಳವನ್ನಾಗಿಸಿಕೊಂಡಿದ್ದಾಳೆ. ಹದಿನೆಂಟು ವರ್ಷಗಳ ಕಾಲ ಇವರ ಕೈಗೊಂಬೆಯನ್ನಾಗಿಸಿಕೊಂಡಿದ್ದಾರೆ. ಮನೆಯನ್ನು ಬೆಳಗಬೇಕಾದ ಹೆಣ್ಣುಮಕ್ಕಳ ಜೀವನವನ್ನು ಹಾಳುಮಾಡಿದವಳಾಗಿದ್ದಾಳೆ. ತನ್ನ ವೇಶ್ಯಾವಾಟಿಕೆಗೆ ಅದೆಷ್ಟೋ ಅಮಾಯಕ ಹೆಣ್ಣುಗಳು ಹದಿನೆಂಟು ವರ್ಷಗಳಲ್ಲಿ ಬಲಿಯಾಗಿದ್ದಾರೋ ಯಾರಿಗೆ ಗೊತ್ತು? ಯಯಾತಿಯಂತಹ ಕಾಮಾಂಧರಿಗೆ ಬಾಳಿ ಬದುಕಬೇಕಾದ ಹೆಣ್ಣುಮಕ್ಕಳು ಬೆಂಕಿಯಲ್ಲಿ ಹಾಕಿದ ಹೂವಿನಂತೆ ಬಾಡಿ ಹೋದವರು ಅದೆಷ್ಟೋ ಮಂದಿ. 'ಮಹಾರಾಜರಿಗೆ ಮನಃಶಾಂತಿ ಬೇಕಲ್ಲ? ಅದನ್ನು ಒದಗಿಸುವ ಅನೇಕ ದೇವತೆಗಳು ನನಗೆ ವಶವಾಗಿದ್ದಾರೆ. ಅದರಲ್ಲಿ ತಮಗೆ ಇಷ್ಟವಾದ ದೇವಿಯ ಆರಾಧನೆಯನ್ನು ತಾವು ಮಾಡಬಹುದು'[೩೦]. ಇಲ್ಲಿ ಹೆಣ್ಣನ್ನು ದೇವತೆ ಎಂದು ಸಂಬೋಧಿಸುವ ಇವರು ಆ ದೇವರನ್ನೇ ತಮ್ಮ ಕಾಮತೃಷೆಗೆ ಬಲಿಯಾಗಿಸಿದ್ದಾರೆ.

ಯತಿಯು ಮೊದಲಿದ್ದ ಸ್ಥಿತಿಗೂ ನಂತರ ಶರ್ಮಿಷ್ಠೆ ನೋಡಿದಾಗ ಇದ್ದಂತಹ ಸ್ಥಿತಿಗೂ ಬಹಳ ಅಜಗಜಾಂತರ ವ್ಯತ್ಯಾಸವನ್ನು ಕಾಣುತ್ತೇವೆ. ಯತಿ ತಂದೆಯ ಶಾಪಕ್ಕೆ ಹೆದರಿ ಸ್ತ್ರೀ ವೈರಿಯಾಗಿದ್ದವನನ್ನು ಮತ್ತು ಭ್ರಮಿಷ್ಟನಾಗಿದ್ದವನನ್ನು ಕಚನ ಮಾರ್ಗದರ್ಶನ ಹಾಗೂ ತಾಯಿಯ ಹಾರೈಕೆಯಿಂದಾಗಿ ಅವನು ಸ್ಥಿಮಿತತೆಯನ್ನು, ಮಾನವತೆಯನ್ನು ಅವನಲ್ಲಿದ್ದ ಅನುಕಂಪವನ್ನು ನೋಡಿದಾಗ ಸ್ಪಷ್ಟವಾಗುತ್ತದೆ. 'ಆತ್ಮದ ಉನ್ನತಿಗಾಗಿ ದೇಹವನ್ನು ದಂಡಿಸುವುದು ಅಥವಾ ದೇಹದ ಸುಖಕ್ಕಾಗಿ ಆತ್ಮವನ್ನು ಮರೆತುಬಿಡುವುದು ಎರಡೂ ತಪ್ಪು ದಾರಿಗಳೇ. ಸ್ತ್ರೀ ಪುರುಷ ಸಂಬಂಧವಾದರೂ ದೇಹ ಮತ್ತು ಆತ್ಮಗಳ ಸಂಬಂಧದಂತೆಯೇ ಇದೆ'[೩೧].

ಈ ಎಲ್ಲಾ ಮಾತುಗಳು 'ಯತಿ'ಯಲ್ಲಾದ ಬದಲಾವಣೆಯನ್ನು ಮತ್ತು ಮಾನವ ಪ್ರೇಮವನ್ನು ವರ್ಣಿಸುತ್ತದೆ. ಕಚನಂತಹ ಸ್ನೇಹಿತ ಹಾಗೂ ಮಾರ್ಗದರ್ಶಕರಿಂದ ಎಂತಹವರ ಜೀವನವೂ ಕೂಡ ಸರಳ ಮತ್ತು ಸುಂದರವಾಗಿ ಸಾಗಲು ಪ್ರೇರಣೆಯಾಗುತ್ತದೆ. ಮಾನವೀಯತೆಯನ್ನು ಮರೆತು ಇಂದು ಪಶುಗಳಂತೆ ಮೃಗೀಯವಾಗಿ ನಡೆದುಕೊಳ್ಳುತ್ತಿದ್ದಾನೆ. ತನ್ನ ಸ್ವಾರ್ಥ ಸಾಧನೆಗಾಗಿ ಪರಸ್ಪರ ದ್ವೇಷಾಸೂಯೆಗಳಲ್ಲಿ ಮಿಂದೇಳುತ್ತಿದ್ದಾನೆ.

'ನನ್ನ ಮೆಚ್ಚಿನ ಯದು! ಆತ ಇಂತಹ ಶಾಪಗ್ರಸ್ತ ತಂದೆಯ ಮಗನಾಗಿ ಹುಟ್ಟಿದ. ಹದ್ದು

ಒಂದು ಮಹಾರಾಣಿಯ ರತ್ನಹಾರವನ್ನು ಎತ್ತಿಕೊಂಡು ಹೋಯಿತು. ಮಕ್ಕಳ ಹಣೆಯ ಬರಹ ತಂದೆ ತಾಯಿಗಳ ಹಣೆಬರಹದೊಂದಿಗೆ ತೊಡಕಿಕೊಂಡಿರುತ್ತದೆನ್ನುವುದೇ ನಿಜ'[೩೨]. ಇದು ಅಕ್ಷರಶಃ ಸತ್ಯವೆನಿಸುತ್ತದೆ. ಯಯಾತಿಯ ತಂದೆ ಮಾಡಿದ ತಪ್ಪಿಗೆ ಯಯಾತಿ ಮತ್ತು ಯತಿ ಇಬ್ಬರೂ ಸಹ ತಮ್ಮ ಜೀವನದಲ್ಲಿ ನರಕಯಾತನೆಯನ್ನು ಅನುಭವಿಸುತ್ತಾರೆ.

ಇದಕ್ಕೆ ನಿದರ್ಶನ ಯಯಾತಿಯ ಹದಿನೆಂಟು ವರ್ಷಗಳ ಭೋಗ ಜೀವನವೇ ಕಾಣುತ್ತದೆ. ಅವನು ತನ್ನ ಆಸೆಗಳ ಹಿಂದೆ ಹೋದದ್ದಕ್ಕಾಗಿ ಸಂಸಾರ ಮತ್ತು ರಾಜ್ಯದ ಆಳ್ವಿಕೆಯನ್ನೇ ಮರೆತು ಹೋದದ್ದನ್ನು ಕಾಣುತ್ತೇವೆ. ಇಂತಹ ಜೀವನವು ಯಯಾತಿಯನ್ನು ಒಬ್ಬ ರಾಜನೆಂದು ಹೇಳುವುದಕ್ಕಿಂತ ಒಬ್ಬ ಸಾಮಾನ್ಯ ಮನುಷ್ಯನ ಪ್ರತಿನಿಧಿಯಾಗುತ್ತಾನೆ.

ಯಯಾತಿಯು ತನ್ನ ಯೌವನವನ್ನು ಎಂದಿಗೂ ಬಿಟ್ಟುಕೊಡಲು ಒಪ್ಪುವುದೇ ಇಲ್ಲ. ಅವನ ಅತೃಪ್ತ ಜೀವನ ಅದಕ್ಕೆ ಕಾರಣವಾಗಿದೆ. ಅವನು ಕೊನೆಯವರೆಗೂ ತನ್ನ ತನವನ್ನು ಬಿಟ್ಟುಕೊಡಲು ಎಂದಿಗೂ ಬಯಸುವುದೇ ಇಲ್ಲ. ತನ್ನ ವಾರ್ಧಕ್ಯವನ್ನು ತನ್ನ ಮಗ ಪುರುವಿಗೆ ಕೊಡುವುದನ್ನು ಕಾಣುತ್ತೇವೆ. ಮನುಷ್ಯನಿಗೆ ಎಷ್ಟು ಸುಖ, ಸಂಪತ್ತು ಇದ್ದರೂ ಆತ ಅತೃಪ್ತನಾಗಿಯೇ ಇರುತ್ತಾನೆ. ಪುರುವು ತನ್ನ ತಂದೆಗಾಗಿ ತನ್ನ ಯೌವನವನ್ನೇ ತ್ಯಾಗ ಮಾಡುತ್ತಾನೆ. ತನ್ನ ತಾಯಿಯಂತೆ ಮಗನೂ ಕೂಡ ತ್ಯಾಗಿಯಾಗಿದ್ದಾನೆ. ಬೇರೊಬ್ಬರ ಜೀವನಕ್ಕಾಗಿ ತನ್ನ ಜೀವನವನ್ನು ತ್ಯಾಗ ಮಾಡುವ ಮಹಾನ್ ತ್ಯಾಗಿಯಾಗಿದ್ದಾನೆ. "ನನಗೆ ನನ್ನ ಪುತ್ರ ಧರ್ಮವನ್ನು ನಡೆಸಬೇಕಾಗಿದೆ. ತಂದೆಯವರ ಅಪೇಕ್ಷೆಯನ್ನು ಪೂರೈಸಬೇಕಾಗಿದೆ. ನಾನು ಮಹಾರಾಜರ ಮಗ. ಅವರ ವಾರ್ಧಕ್ಯವನ್ನು ತೆಗೆದುಕೊಳ್ಳುವ ನನ್ನ ಅಧಿಕಾರವನ್ನು ಮನ್ನಿಸದಿರುವುದು ಯಾರಿಗೂ ಸಾಧ್ಯವಿಲ'[೩೩]. ಇಲ್ಲಿ ತನ್ನ ತಂದೆಯ ಆಸೆಯನ್ನು ಪೂರೈಸುವುದು ಮಗನ ಕರ್ತವ್ಯವಾಗಿದೆ. ಅವನು ತನ್ನ ಯೌವನವನ್ನೂ ಲೆಕ್ಕಿಸದೆ ವಾರ್ಧಕ್ಯವನ್ನು ಸ್ವೀಕರಿಸುತ್ತಾನೆ. ಆದರೆ ಯಯಾತಿ ಈ ವಿಷಯದಲ್ಲಿ ಬಹಳ ಸ್ವಾರ್ಥಿಯಾಗುತ್ತಾನೆ. ಯಾವ ತಂದೆಯೂ ಕೂಡ ತಮ್ಮ ಮಕ್ಕಳಿಗೆ ಕೆಡುಕನ್ನು ಬಯಸಲಾರರು. ಆದರೆ ಯಯಾತಿಗೆ ತನ್ನ ಅತೃಪ್ತಿಯಿಂದ ಎಲ್ಲವನ್ನೂ ಮರೆತುಬಿಡುತ್ತಾನೆ. ಇದು ಒಂದು ರೀತಿಯಲ್ಲಿ ದುರಂತವಾದರೂ ಸಹ ಮತ್ತೆ ಪುರುವಿನಿಂದಾಗಿಯೇ ತನ್ನ ಜೀವನದ ಅರಿವು ಮೂಡುವುದು ವಿಶೇಷ ಇಲ್ಲಿ. ಕೊನೆಯಲ್ಲಿ ತಾನು ಮಾಡಿದ ತಪ್ಪಿನ ಅರಿವಾದ ಯಯಾತಿ ಪುರುವಿಗೆ ಯೌವನವನ್ನೇ ಹಿಂದಿರುಗಿಸಲು ನಿರ್ಧರಿಸುತ್ತಾನೆ. ಆ ಮೂಲಕ ತನ್ನ ಸಾವಿನ ನಿರ್ಧಾರವನ್ನು ತಾನು ಸ್ವೀಕರಿಸುತ್ತಾ ಇತರರಿಗಾಗಿ ಸಾಯುವುದರಲ್ಲಿ ಆನಂದವಿದೆ ಎಂಬ ಸತ್ಯವನ್ನು ಸಾರುತ್ತಾನೆ. ಆ ಮೂಲಕ ಸಾವಿನ ಭೀತಿಯನ್ನು ಗೆಲ್ಲುತ್ತಾನೆ.

## ಕೊನೆ ಟಿಪ್ಪಣಿಗಳು

೧. ಯಯಾತಿ, ಪುಟ ೧

೨. ಅದೇ, ಪುಟ ೫

೩. ಅದೇ, ಪುಟ ೬

೪. ಅದೇ, ೭

೫. ಅದೇ, ಪುಟ ೮

೬. ಅದೇ, ಪುಟ ೮

೭. ಅದೇ, ೨೫

೮. ಅದೇ, ಪುಟ ೩೬

೯. ನವನೀತ ಪುಟ ೧೫೫

೧೦. ಅದೇ, ೫೪

೧೧. ಅದೇ, ಪುಟ ೯೧

೧೨. ಅದೇ, ಪುಟ ೯೩

೧೩. ಅದೇ, ೧೧೪

೧೪. ಅದೇ, ಪುಟ ೧೨೦

೧೫. ನವನೀತ, ೧೫೬

೧೬. ಅದೇ, ಪುಟ ೧೨೭

೧೭. ಅದೇ, ಪುಟ ೧೩೦

೧೮. ಅದೇ, ೧೩೮

೧೯. ಅದೇ, ಪುಟ ೧೩೦

೨೦. ಅದೇ, ಪುಟ ೧೪೩

೨೧. ನವನೀತ, ಪುಟ ೧೫೬

೨೨. ಅದೇ, ಪುಟ ೧೫೦

೨೩. ಅದೇ, ೧೫೬

೨೪. ಅದೇ, ಪುಟ ೧೫೬

೨೫. ಅದೇ, ಪುಟ ೧೦೭

೨೬. ಅದೇ, ೩೦೮

೨೭. ಅದೇ, ಪುಟ ೬೧

೨೮. ಅದೇ, ಪುಟ ೩೦೦

೨೯. ಅದೇ, ೩೧೬

೩೦. ಅದೇ, ಪುಟ ೩೪೧

೩೧. ಅದೇ, ಪುಟ ೩೫೩

೩೨. ಅದೇ, ೩೫೮

೩೩. ಅದೇ, ಪುಟ ೩೭೦

# ಅಧ್ಯಾಯ ಮೂರು

## ಸಾಮಾನ್ಯ ವರ್ಗದ ಮಹಿಳಾ ಪಾತ್ರಗಳು

**ಯ**ಯಾತಿ ಕಾದಂಬರಿಯು ಪೌರಾಣಿಕ ಕಥೆಯಾಗಿದ್ದರೂ ಸಹ ಅದು ವಾಸ್ತವದ ಹಲವು ಮಜಲುಗಳನ್ನು ತೋರಿಸುತ್ತದೆ. ಕೇವಲ ಯಯಾತಿ, ದೇವಯಾನಿ, ಶರ್ಮಿಷ್ಠೆಯರ ಕಥೆಯಾಗಿರದೆ ಶ್ರೀ ಸಾಮಾನ್ಯರ ಬದುಕು ಇದರಲ್ಲಿ ಚಿತ್ರಿತವಾಗಿರುವುದು ಇನ್ನೊಂದು ವಿಶೇಷ. ಅರಮನೆಯಲ್ಲಿನ ವೈಭವಗಳು, ಅದರೊಂದಿಗಿನ ಶ್ರೀ ಸಾಮಾನ್ಯರ ಒಡನಾಟ ಎಂತದ್ದು ಹಾಗೂ ಅಲ್ಲಿನ ರಾಜ ವೈಭೋಗದಲ್ಲಿನ ಒಳ ಆಡಳಿತಗಳಲ್ಲಿ ಕಂಡೂ ಕಾಣದೆ ಇದ್ದಂತೆ ಘಟನೆಗಳು, ಸನ್ನಿವೇಶಗಳು ಇವೆಲ್ಲವುಗಳನ್ನು ಸೂಕ್ಷ್ಮವಾಗಿ, ಕೂಲಂಕಷವಾಗಿ ಕಾದಂಬರಿ ನಿರೂಪಿಸುತ್ತಾ ಹೋಗುತ್ತದೆ.

ಇಂತಹ ರಾಜ ವೈಭೋಗದಲ್ಲಿ ಸುಖಿಯಾಗಿದ್ದಂತಹ ನಹುಷ ಮಹಾರಾಜನ ರಾಜ್ಯದಲ್ಲಿ ಮಹಿಳೆಯರಿಗೆ ಯಾವ ಸ್ಥಾನಮಾನವಿತ್ತು, ಅವರಲ್ಲಿಯ ತಲ್ಲಣಗಳಿಗೆ ಎಷ್ಟು ಮಾನ್ಯತೆ ಇತ್ತು ಎಂಬುದನ್ನು ಈ ಕಾದಂಬರಿಯು ಅತ್ಯಂತ ಸೂಕ್ಷ್ಮವಾಗಿ ನಿರೂಪಿಸಿದೆ. ಶತಶತಮಾನಗಳಿಂದಲೂ ಹೆಣ್ಣನ್ನು ಎರಡನೇ ದರ್ಜೆಯ ವ್ಯಕ್ತಿಯನ್ನಾಗಿಯೇ ನಡೆಸಿಕೊಂಡು ಬರಲಾಗಿದೆ. ಅದರಲ್ಲೂ ಭಾರತದಂತಹ ಸಂದರ್ಭದಲ್ಲಿ ಅವಳನ್ನು ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯವಾಗಿ ಶೋಷಣೆಗೆ ಒಳಗುಮಾಡುತ್ತಲೇ ಬರಲಾಗಿದೆ.

ಮಹಿಳೆಯರ ಬದುಕಿನ ಅಸ್ತಿತ್ವದ ಎಲ್ಲ ನೆಲೆಗಳಲ್ಲಿಯೂ ಸಾಮಾಜಿಕ ಚೌಕಟ್ಟಿನ ಬಂಧನ ಅವಳನ್ನು ಸುತ್ತುವರಿದಿದೆ. 'ಸ್ತ್ರೀಯರನ್ನು ತುಳಿಯುವ, ದಮನ ಮಾಡುವ ಶೋಷಕ ಪ್ರವೃತ್ತಿ ಪುರುಷರಲ್ಲಿ ಪರಂಪರಾಗತವಾಗಿ ಬೇರೂರಿದೆ. ಪಿತೃ ಪ್ರಧಾನ ವ್ಯವಸ್ಥೆಯ ಮೌಲ್ಯಗಳೇ ತಂಬಿದ ಇಂತಹ ನೆಲಗಟ್ಟಿನಲ್ಲಿ ಮಹಿಳೆಯರು ಪುರುಷರೊಂದಿಗೆ ಸಮಾನ ಸ್ಥಾನಮಾನವನ್ನು ಹೊಂದಿಲ್ಲ. ಅದಕ್ಕಿಂತ ಘೋರವಾಗಿ ದಾರುಣ ದುಃಖವನ್ನು ಹೊಂದಿ ಹೊರಬರಲಾರದ ಸೆರೆವಾಸದ

ಸ್ಥಿತಿಯಲ್ಲಿದ್ದಾರೆ. ಹುಟ್ಟುವ ಮುಂಚಿನಿಂದಲೂ 'ಹೆಣ್ಣು ಹಡಿಯಲು ಬ್ಯಾಡ ಹೆರವರಿಗೆ ಕೊಡಬ್ಯಾಡ' ಎಂಬ ಸೂಚನೆ ಎಚ್ಚರಿಕೆಯೊಂದಿಗೆ ಭೂಮಿಗೆ ಬರುವ ಸ್ತ್ರೀ ಎಂಬ ಮಗುವಿಗೆ ಅಲ್ಲಿಂದಲೇ ಅಸ್ತಿತ್ವದ ಪ್ರಶ್ನೆ ಉದ್ಭವಿಸುತ್ತದೆ'[೧]. ಇಂತಹ ಸಂದರ್ಭದಲ್ಲಿ ಮಹಿಳೆ ಸ್ವತಂತ್ರಳಾಗಿರಲು ಸಾಧ್ಯವಿಲ್ಲ.

ಕಾದಂಬರಿಯಲ್ಲಿ ಕಾಮಲಾಲಸೆಗೆ ಹೆಣ್ಣಿನ ಮೇಲೆ ನಡೆಸುವಂತಹ ಅಧಿಕಾರ, ದರ್ಪ ಎಲ್ಲವೂ ಕೂಡ ಆರಂಭದಿಂದ ಕಡೆಯವರೆಗೂ ಕಾಣುತ್ತೇವೆ. ನಹುಷ ಮಹಾರಾಜ ತನ್ನ ಅಧಿಕಾರ ದರ್ಪದಿಂದ ಇಂದ್ರಾಣಿಯನ್ನು ಪಡೆಯಲೇಬೇಕೆಂಬ ಹಠಕ್ಕೆ ಬಿದ್ದು, ಅಗಸ್ತ್ಯ ಋಷಿಯ ಶಾಪಕ್ಕೆ ಬಲಿಯಾಗುತ್ತಾನೆ. ಅಲ್ಲಿಂದ ಆರಂಭವಾದದ್ದು ಯಯಾತಿಯ ಜೀವನ ಬದಲಾಗುವವರೆಗೆ ಅನೇಕ ಸಾಮಾನ್ಯ ವರ್ಗದ ಮಹಿಳಾ ಪಾತ್ರಗಳು ಬಂದು ಹೋಗುತ್ತವೆ. ಒಂದೊಂದು ಮಹಿಳಾ ಪಾತ್ರವು ಒಂದೊಂದು ಆಯಾಮವನ್ನು ತೆರೆದಿಡುತ್ತಾ ಹೋಗುತ್ತದೆ. ರಾಜಮಾತೆಯನ್ನು ಒಳಗೊಂಡಂತೆ ಶರ್ಮಿಷ್ಠೆ, ಕಲಿಕ, ಅಲಕಾ, ಮುಕುಲಿಕೆ, ಮಾಧವಿ, ತಾರಕೆ ಹೀಗೆ ಅನೇಕ ಪಾತ್ರಗಳ ಚಿತ್ರಣ ಇಲ್ಲಿ ನಿರೂಪಿತವಾಗಿದೆ.

ಕಲಿಕಾ ಎಂಬ ದಾಸಿಯು ರಾಜಮಾತೆಗೆ ತೀರ ಹತ್ತಿರದವಳು ಮತ್ತು ಮೆಚ್ಚುಗೆಗೆ ಪಾತ್ರಳಾದ ಒಬ್ಬ ದಾಸಿಯಾಗಿದ್ದಾಳೆ. ಯಯಾತಿಗೆ ತನ್ನ ಹಾಲನ್ನೂಡಿದವಳೂ ಆಗಿದ್ದಾಳೆ. ಹೀಗಿರುವಾಗ ವಾತ್ಸಲ್ಯದಿಂದ ಯಯಾತಿಯನ್ನು ಅಪ್ಪಿ ಮುದ್ದಾಡಿದ್ದಾಳೆ. ಆದರೆ ತನ್ನ ಮಗಳಿಗಾದರೆ ತನ್ನ ಹಾಲನ್ನೂಡುವ ಸ್ವಾತಂತ್ರ್ಯ ಸಹ ಇಲ್ಲಿರುವುದಿಲ್ಲ. ತಾಯಿಯಾದವಳು ತನ್ನ ಎದೆಯ ಹಾಲನ್ನು ತನ್ನ ಮಕ್ಕಳಿಗೆ ಕುಡಿಸಿ ವಾತ್ಸಲ್ಯ, ಪ್ರೀತಿಯನ್ನು ಧಾರೆ ಎರೆಯುತ್ತಾಳೆ. ಆದರೆ ದುರ್ದೈವಿ ಅಲಕೆಗೆ ಇದು ಬಾಲ್ಯದಲ್ಲಿ ದೊರೆಯುವುದಿಲ್ಲ. ಅಲಕೆಯ ಈ ರೀತಿಯ ಒಂದು ತ್ಯಾಗ ಜೀವನ ಯಯಾತಿಗಾಗಿಯೇ ಆರಂಭವಾಗಿ, ಪ್ರಾಣತ್ಯಾಗಮಾಡುತ್ತಾಳೆ. ಇಲ್ಲಿ ಸ್ತ್ರೀ ಸಾಮಾನ್ಯರು ತಮಗಾಗಿ ಅಲ್ಲದಿದ್ದರೂ ಇನ್ನೊಬ್ಬರಿಗಾಗಿ ತಮ್ಮ ಜೀವನವನ್ನು ಸವೆಸುವುದೇ ಹೆಚ್ಚು ಎಂಬುದು ಸ್ಪಷ್ಟವಾಗುತ್ತದೆ.

ಮಗು ಹುಟ್ಟುವಾಗ ಸ್ವತಂತ್ರವಾಗಿ ಹುಟ್ಟುತ್ತದೆ. ಬೆಳೆಯುವಾಗ ಹಲವು ಬಂಧನಕ್ಕೊಳಗಾಗುತ್ತದೆ, ಎಂದು ಹೇಳುವ ಅರಿಸ್ಟಾಟಲ್‌ನ ಮಾತನ್ನು ಇಲ್ಲಿ ಸ್ಮರಿಸಬಹುದು. ಮಕ್ಕಳ ಮನಸ್ಸು ನಿಷ್ಕಲ್ಮಷವಾದದ್ದು. ಅವರಲ್ಲಿ ಯಾವ ಭಿನ್ನ ಭೇದಗಳು ಇರುವುದಿಲ್ಲ. ಆದರೆ ಅದಕ್ಕೆ ಹಿರಿಯರು ಮತ್ತು ಸಮಾಜ, ಧರ್ಮ, ಜಾತಿ, ಮೌಢ್ಯವನ್ನು ಬಿತ್ತುತ್ತಾ, ಬೆಳೆಸುತ್ತಾ ಮತ್ತು ಅದನ್ನು ಹಂತ ಹಂತವಾಗಿ ದೂರಮಾಡುತ್ತದೆ. 'ತೀರ ಚಿಕ್ಕವನಿದ್ದಾಗ ಅಲಕೆಯಂತೆ ಅನೇಕ ಚಿಕ್ಕ ಮಕ್ಕಳು ಅರಮನೆಯಲ್ಲಿ ನನ್ನೊಡನೆ ಆಟವಾಡುತ್ತಿದ್ದರು. ಆದರೆ ದಾಸ ದಾಸಿಯರ ಮಕ್ಕಳನ್ನು ಮಂಚದ ಮೇಲೆ ಏರಿಸಿ

ಕೂರಿಸಿಕೊಳ್ಳುವುದಕ್ಕೆ ಭಯವೆನಿಸುತ್ತಿತ್ತು’[೨]. ಯಯಾತಿಯ ಈ ಮಾತಿನಲ್ಲಿ ಸಾಮಾನ್ಯ ವರ್ಗದ ಮಕ್ಕಳಿಗೂ ಶ್ರೀಮಂತ ವರ್ಗದ ಮಕ್ಕಳಿಗೂ ಇರುವ ಅಂತರ ಹಾಗೂ ಭಾವನೆಗಳ ತಳಮಳವನ್ನು ಗುರುತಿಸಬಹುದಾಗಿದೆ.

ರಾಜ್ಯವನ್ನಾಳುವ ವೀರ ನಹುಷ ಮಹಾರಾಜನ ಪತ್ನಿ ರಾಜಮಾತೆಯು ಎಲ್ಲರ ಮುಂದೆ ಮಹಾರಾಣಿಯಾಗಿ ಹೊರನೋಟಕ್ಕೆ ಸುಖಜೀವನವನ್ನು ಸಾಗಿಸುತ್ತಿದ್ದಳಾದರೂ ಅವಳು ಅರಮನೆಯೊಳಗೆ ಅಂತರಂಗದಲ್ಲಿ ಒಬ್ಬ ದಾಸಿಯ ಜೀವನವನ್ನು ಅನುಭವಿಸುವವಳಾಗಿದ್ದಳು. ಅವಳೇ ತನ್ನ ಮಗನಿಗೆ ಹೇಳಿಕೊಳ್ಳುವಂತೆ ತನ್ನ ಮಗನ ಮದುವೆ ಮಾಡಲು ಆಶಿಸುತ್ತಾಳೆ. ಅದೇ ಸಂದರ್ಭದಲ್ಲಿ ತನ್ನ ಹಾಗೂ ಪತಿಯ ಸಂಬಂಧಗಳ ಕಟು ಸತ್ಯವನ್ನೂ ಹೊರಹಾಕುತ್ತಾಳೆ. ‘ನಿನ್ನ ತಂದೆ ಪರಾಕ್ರಮಿಯಾಗಿದ್ದರೂ, ಇಂದ್ರನನ್ನು ಸೋಲಿಸಬಲ್ಲವರಾಗಿದ್ದರು. ಆದರೆ ನನ್ನೊಡನೆ ಇಟ್ಟುಕೊಂಡಿದ್ದ ಆಣೆಯ ಯಾವ ಮಾತನ್ನೂ ಅವರು ನಡೆಸಿಕೊಡಲಿಲ್ಲ. ನಾನು ಮಹಾರಾಣಿಯಾಗಿರಲಿಲ್ಲ, ಯಯು ಮಹಾದಾಸಿಯಾಗಿದ್ದೆ! ಅವರು ಹೇಳಿದ ತಾಳಕ್ಕೆ ಸರಿಯಾಗಿ ಬದುಕಿನುದ್ದಕ್ಕೂ ಕುಣಿದೆ! ಇನ್ನು ಮುಂದೆ ಹಾಗೆ ಕುಣಿಯುವ ಹಾಗಿಲ್ಲ. ಹೆಂಗಸಿನ ಅಧಿಕಾರ ಗಂಡನಿಗಿಂತಲೂ ಹೆಚ್ಚಾಗಿ ಮಗನ ಮೇಲಿರುತ್ತದೆ. ಮಗ ಆಕೆಯ ರಕ್ತಮಾಂಸಗಳ ಒಂದು ಅಂಗವಾಗಿರುತ್ತಾನೆ’[೩]. ಆಕೆಯ ಈ ಮಾತುಗಳಲ್ಲಿ ಗಂಡು ಹೆಣ್ಣಿನ ನಡುವೆ ವೈವಾಹಿಕ ಜೀವನದ ಕಟುಸತ್ಯದ ತಲ್ಲಣಗಳು ದಾಖಲಾಗಿವೆ. ಮಹಾರಾಣಿಯಾಗಿಯೂ ಒಬ್ಬ ಸ್ತ್ರೀ ಒಬ್ಬ ಗಂಡನ ಬಳಿ ಮಹಾದಾಸಿಯಂತೆ ನನ್ನ ಬದುಕಿತ್ತು, ಎಷ್ಟು ಬೇಕಾದವರಾದರೂ ಒಬ್ಬರ ಎಲೆಯ ಹತ್ತಿರ ಕುಳಿತು ಅವರು ಹಾಕಿದಷ್ಟನ್ನು ತಿನ್ನಬೇಕಾದ ಒಂದು ಬೆಕ್ಕಿನಂತೆ ಬದುಕುವುದೆಂದರೆ ಎಂದುಕೊಳ್ಳುತ್ತ ಉಕ್ಕಿ ಬಂದ ದುಃಖವನ್ನು ನುಂಗಿಕೊಳ್ಳುವ ಆ ಸ್ಥಿತಿ ನಿಜವಾಗಿಯೂ ಸ್ತ್ರೀಯೊಬ್ಬಳ ಸ್ವಾತಂತ್ರ್ಯ ರಹಿತ ಬದುಕಿನ ದಾರುಣತೆಯನ್ನು ದಾಖಲಿಸುತ್ತದೆ. ಸಮಾಜದ ಬಹುತೇಕ ಎಲ್ಲಾ ಹೆಣ್ಣುಮಕ್ಕಳ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿರಲಾರದು. ಆದರೆ ಅದೇ ಹೆಣ್ಣು ಹೆಂಡತಿಯಾಗಿ ಅನುಭವಿಸಲಾರದ ಅಧಿಕಾರವನ್ನು ರಾಜಮಾತೆಯಾಗಿ ಅಥವಾ ತಾಯಿಯಾಗಿ, ಅತ್ತೆಯಾಗಿ ಅನುಭವಿಸಬಹುದು. ಬಹುಶಃ ಆಗಲೂ ಕೂಡ ತಾಯಿ–ಮಗ; ಅತ್ತೆ–ಸೊಸೆ ಇವರ ಸಂಬಂಧಗಳು ಸಮಸ್ಯೆಯನ್ನು ಉಂಟುಮಾಡದೆ ಇರುವುದಿಲ್ಲ.

ಶರ್ಮಿಷ್ಠೆಯು ರಾಜ ಕನ್ಯೆಯಾಗಿದ್ದರೂ ಸಹ ದೇವಯಾನಿಯ ಹಠಕ್ಕೆ, ಸೇಡಿಗೆ ಸಿಲುಕಿ ಇಡೀ ಜೀವನ ಪೂರ್ತಿ ದಾಸಿಯಾಗಿ ಜೀವನವನ್ನು ಕಳೆಯಬೇಕಾದ ಪರಿಸ್ಥಿತಿ ಒದಗುತ್ತದೆ. ಆದರೂ ಅದನ್ನು ತಿರಸ್ಕರಿಸಿದೆ ಸಂತೋಷದಿಂದಲೇ ಸ್ವೀಕರಿಸುವ ವ್ಯಕ್ತಿತ್ವ ಆಕೆಯದು.

ಶರ್ಮಿಷ್ಠೆ ತನ್ನ ಅಸಮಾಧಾನಕ್ಕೆ ಸಿಲುಕಿ ದೇವಯಾನಿಗೆ ಕೆಟ್ಟದಾದ ನಾಲ್ಕು ಮಾತುಗಳನ್ನು ಆಡುತ್ತಾಳೆ. ಆ ಬಗ್ಗೆ ಅವಳ ಆತಂಕ ಈ ರೀತಿ ವ್ಯಕ್ತವಾಗಿದೆ. 'ನನ್ನ ಬಾಯಿಂದ ನಿನ್ನ ಬಗ್ಗೆ ನಾಲ್ಕು ಮಾತುಗಳು ಹೊರಬಿದ್ದವು ನಿಜ. ಆದರೆ ಅವು ಈಗ ನನ್ನ ಬದುಕನ್ನೇ ಹಾಳು ಮಾಡುವುದರಲ್ಲಿವೆ. ಒಂದು ತಪ್ಪಿಗಾಗಿ ರಾಜಕನ್ಯೆ ದಾಸಿಯಾಗುವಂತೆ ಶಿಕ್ಷೆಯನ್ನು ವಿಧಿಸಲಾಗುತ್ತಿದೆ'[೪]. ದೇವಯಾನಿ ಹೆಜ್ಜೆ ಹೆಜ್ಜೆಗೂ ತನ್ನನ್ನು ಅವಮಾನಿಸಿದರೂ ಸಹ ತಾಳ್ಮೆಯಿಂದ ಎಲ್ಲವನ್ನೂ ಸಹಿಸಿಕೊಂಡು ಸಾಗುತ್ತಾಳೆ. ಅದು ಆಕೆಯ ಮಗನಿಗೂ ಆನುವಂಶಿಕವಾಗಿ ಹೋಗುತ್ತದೆ. ಇಷ್ಟೆಲ್ಲವೂ ಹೆಣ್ಣು ಸಹನಾಮಯಿ, ಕರುಣಾಳು ಎಂದು ಹೇಳುತ್ತಲೆ ಹೆಣ್ಣನ್ನು ಶೋಷಣೆ ಮಾಡಿಕೊಂಡು ಬಂದಿರುವುದು ಪುರುಷ ಪ್ರಧಾನ ಸಮಾಜದಲ್ಲಿ ಶರ್ಮಿಷ್ಠೆಯಂತಹ ವ್ಯಕ್ತಿತ್ವ ಹೆಣ್ಣಿಗೆ ಹೋಲಿಕೆಯಾಗುತ್ತದೆ.

ಕಾದಂಬರಿಯಲ್ಲಿನ ಅಲಕೆಯು ಶರ್ಮಿಷ್ಠೆಯಂತಹ ವ್ಯಕ್ತಿತ್ವವನ್ನು ಹೊಂದಿದ್ದವಳಾಗಿದ್ದಾಳೆ. ಯಯಾತಿಗೆ ಮೊದಲು ಪ್ರೀತಿಯ ಸವಿಯನ್ನು ಕೊಟ್ಟವಳು ಈ ಅಲಕೆಯೇ. ದಾಸಿಯ ಮಗಳಾದ ಇವಳು ತನ್ನ ಕರ್ತವ್ಯವನ್ನು ಬಹಳ ಅಚ್ಚುಕಟ್ಟಾಗಿ ಶ್ರದ್ಧೆಯಿಂದ ನಿರ್ವಹಿಸುವ ಇವಳು ಯಯಾತಿಯಂತಹ ಕಾಮುಕರ ಕೆಂಗಣ್ಣಿಗೆ ಗುರಿಯಾಗಬೇಕಾಗುತ್ತದೆ. ಜನಸಾಮಾನ್ಯರು, ದುಡಿಯುವ ವರ್ಗದವರು ಇಂತಹ ಯಾಜಮಾನಿಕೆಯನ್ನು ನಡೆಸುವ ಮಾಲಿಕನ ಸೆರೆಯಾಗಬೇಕಾಗುತ್ತದೆ. ಆದರೂ ಇಲ್ಲಿ ಅಲಕೆಯು ಪ್ರೀತಿಯಿಂದಲೇ ಪ್ರೀತಿಯನ್ನು ನೀಡಿದವಳಾಗಿ ಯಯಾತಿಯ ಮನಸ್ಸಲ್ಲಿ ಅಚ್ಚಳಿಯದ ಒಂದು ಪ್ರೀತಿಯ ಪುತ್ಥಳಿಯಾಗಿದ್ದಾಳೆ. ಇವಳ ಮದುವೆಯಾದಾಗ ಯಯಾತಿಗೆ ತಿಳಿಯದೇ ಇದ್ದಂತಹ ಸಂದರ್ಭದಲ್ಲಿ ಅಲಕೆ ಎಲ್ಲೆಂದು ತನ್ನ ತಾಯಿಯನ್ನು ಪ್ರಶ್ನಿಸಿದಾಗ ತಾಯಿಯಿಂದ ಬರುವ ಉತ್ತರ ಹೀಗಿದೆ. ಆಕೆ ವ್ಯಂಗ್ಯವಾಗಿ ಚಿಕ್ಕಮ್ಮನ ಮನೆಗೆ ಹೋಗಿದ್ದಾಳೆ. ಯಾತಕ್ಕೆಂದರೆ ಆಕೆಯ ಮದುವೆಯಾಯಿತು. 'ಅದೇನು ದೊಡ್ಡ ವಿಷಯವೆಂದು ನಿನಗೆ ತಿಳಿಸಬೇಕು? ದಾಸಿಯೊಬ್ಬಳ ಮಗಳ ಮದುವೆ ಹಾಗೂ ಒಂದು ಬೊಂಬೆಯ ಮದುವೆ ಎರಡೂ ಒಂದೇ'[೫]. ಅಂದರೆ ಇವರ ದೃಷ್ಟಿಯಲ್ಲಿ ದಾಸಿಯಾದವರು ಅಥವಾ ಶ್ರೀ ಸಾಮಾನ್ಯರು ಮನುಷ್ಯರಲ್ಲ, ಅವರಿಗೆ ಒಂದು ಸಾಮಾಜಿಕ ಬದುಕೇ ಇಲ್ಲ ಎಂದು ತೀರ್ಮಾನಿಸಿದಂತೆ ಆಗುತ್ತದೆ. 'ಮನುಷ್ಯ ಸಾಯುವ ಮೊದಲಿನ ಆಪೇಕ್ಷೆಯನ್ನು ಪೂರೈಸಬೇಕು. ಅಷ್ಟಕ್ಕಾಗಿ ಅಲಕೆಯ ಮೇಲೆ ದಯೆತೋರಿದ್ದೇನೆ. ಇಲ್ಲವಾದರೆ'[೬] ಎಂಬ ಮಾತಿನ ಅಧಿಕಾರವಾಣಿಯನ್ನು ಇಲ್ಲಿಗೆ ಗಮನಿಸಬಹುದು. ಒಂದು ಕಾಲಕ್ಕೆ ತಾನು ಮಹಾದಾಸಿಯಾಗಿ ಬದುಕಿದ್ದೆ ಎಂದು ದುಃಖವನ್ನು ತೋಡಿಕೊಳ್ಳುವ ಹೆಣ್ಣೇ ಇಂದು ಕೊಲೆಗೀಡಾಗಿದ್ದಾಳೆ ಎಂಬುದು ಓದುಗರನ್ನು ದಂಗುಬಡಿಸುತ್ತದೆ. ಅಲಕೆಯನ್ನು ಯಯಾತಿಯ ತಂಗಿಯೆಂದು ಒಪ್ಪಿಕೊಳ್ಳಲು ಸಹಿಸಲಾರದೆ ವಿಷ ಕುಡಿಸುವ ಇಂತಹ ದುಷ್ಟರು ಕೂಡ ಇದ್ದಾರೆ.

'ಹೆಣ್ಣಿಗೆ ಹೆಣ್ಣೇ ಶತ್ರು' ಎಂದು ಹೇಳುವ ಮಾತು ಇಂತಹ ಸನ್ನಿವೇಶದಲ್ಲಿ ನಿಜ ಎನಿಸುತ್ತದೆ. ಈ ಸಂಬಂಧವಾಗಿ ಆಕೆ ಒಪ್ಪಿಕೊಳ್ಳದಿದ್ದರೂ ಸಹ ಅಲಕೆಯನ್ನು ಕೊಲೆ ಮಾಡಿದ್ದರಲ್ಲಿ ಯಾವ ಅರ್ಥವೂ ಇಲ್ಲ. ಒಂದು ಹೆಣ್ಣಿನ ಜೀವನವನ್ನು ಅಮಾನುಷವಾಗಿ ಹತ್ಯೆಗೀಡುಮಾಡಿದ್ದು ಎಷ್ಟರಮಟ್ಟಿಗೆ ಸರಿ? ಜೊತೆಗೆ ಒಬ್ಬರ ಜೀವವನ್ನು ತೆಗೆಯುತ್ತೇವೆ ಎಂದಾಗ ಆ ಜೀವಕ್ಕೆ ಮತ್ತೆ ಜೀವ ಕೊಡುವ ಅಧಿಕಾರವಿದ್ದರೆ ಮಾತ್ರ ಪ್ರಾಣ ಹಾನಿಮಾಡುವ ಅಧಿಕಾರ ಇರುತ್ತದೆ. ಆ ಅಲಕೆಯಂತಹ ಎಷ್ಟೋ ಕೊಲೆಗಳು ಆ ನೆಲಮಾಳಿಗೆಯಲ್ಲಿ ನಡೆದುಹೋಗಿವೆ. ಅವು ಗೌಪ್ಯವಾಗಿಯೇ ನಡೆದು ಯಾರಿಗೂ ತಿಳಿಯದೇ ಮುಚ್ಚಿ ಹೋಗುತ್ತವೆ ಎಂಬುದಕ್ಕೆ ಅತ್ತೆಗೆ ತಕ್ಕ ಸೊಸೆಯಾದ ದೇವಯಾನಿಯೂ ಸಹ ಶರ್ಮಿಷ್ಠೆಯನ್ನು ಅದೇ ನೆಲಮಾಳಿಗೆಯಲ್ಲಿ ಅವಳನ್ನು ಕೊಲೆಗೈಯ್ಯಲು ಪ್ರಯತ್ನಿಸುವುದು ಜೀವಂತ ಸಾಕ್ಷಿಯಾಗಿದೆ. ದೇವಯಾನಿ ಮತ್ತೊಮ್ಮೆ ಅದನ್ನು ಖಚಿತಪಡಿಸುತ್ತಾಳೆ. ಆ ಅಲಕೆಯ ದೌರ್ಭಾಗ್ಯ ತಾಯಿ ತನ್ನ ಮಗಳ ಸಾವು ಹೇಗಾಯಿತು? ಯಾಕೆ ಸಾವಿಗೀಡಾದಳು ಎಂಬುದನ್ನು ಯಾರೂ ಸ್ಪಷ್ಟವಾಗಿ ಹೇಳದೇ, ಮಾರಕ ರೋಗಕ್ಕೆ ತುತ್ತಾಗಿ ಸಾವಿಗೀಡಾದಳು ಎಂಬುದಾಗಿ ನಂಬಿಸಲಾಗಿತ್ತು.

ಅಲಕೆಯ ಅವಸಾನವಾದ ಸ್ವಲ್ಪ ಕಾಲದಲ್ಲಿಯೇ ರಾಜ್ಯಭಿಷೇಕದ ಸಮಾರಂಭ ನಡೆಯಿತು. ಯಯಾತಿ ತನ್ನ ತಾಯಿಯ ಮೇಲಿದ್ದ ದ್ವೇಷದ ಮಾತುಗಳನ್ನು ಆಗ ತನ್ನಲ್ಲಿಯೇ ಹೀಗೆ ಹೇಳಿಕೊಳ್ಳುತ್ತಾನೆ. 'ಒಂದೇ ಕಡೆಯಲ್ಲಿ ಮಹತ್ವಾಕಾಂಕ್ಷಿಯಾದ ಒಬ್ಬ ಕೊಲೆಗಡುಕ ತಾಯಿ ರಾಜಮಾತೆಯ ವೈಭವದಲ್ಲಿ ಮೆರೆಯುತ್ತಿದ್ದಾಳೆ. ಆದರೆ ಸುಸ್ವಭಾವದ, ನಿರಪರಾಧಿಯಾದ ಇನ್ನೊಬ್ಬ ತಾಯಿ ತನ್ನ ಒಬ್ಬಳೇ ಮಗಳಿಗಾಗಿ ಕಣ್ಣೀರು ಹಾಕುತ್ತ ನಿಂತಿದ್ದಾಳೆ!'[೭]. ಮುಂದುವರಿದು ಈ ಅಭಿಷೇಕವನ್ನು ನೊಡಲು ತನ್ನ ಮಗಳು ಅಲಕೆ ಇರಬೇಕಾಗಿತ್ತು. ಯಾರೋ ಸಹಜವಾಗಿ ಹೇಳಿದಾಗ ಆಕೆಯ ಹೃದಯದ ನೋವು ಮತ್ತೆ ನೀರಾಗಿ ಹರಿಯಿತು. 'ಕೂಡಲೆ ನಿನ್ನ ತಂಗಿಯ ಮನೆಗೆ ನೀನು ಹೊರಟುಹೋಗು. ಇಲ್ಲಿ ನಿಂತುಕೊಂಡು ಅತ್ತು ಅಪಶಕುನ ಮಾಡುವುದು ಬೇಡ'[೮] ಎಂದು ನಿಷ್ಪಕ್ಷಪಾತವಾಗಿ ಮಾತಾಡಿದ ಅದೇ ತಾಯಿ ತನ್ನ ಮೊದಲ ಮಗ 'ಯತಿ'ಯನ್ನು ಕಳಕೊಂಡಾಗ ಆಕೆಯ ದುಃಖ ಮುಗಿಲು ಮುಟ್ಟಿತ್ತು. ಚಡಪಡಿಕೆ, ಕಳವಳ, ಸಂಕಟ ಆಕೆ ಕೂಡ ಅನುಭವಿಸಿದವಳಾಗಿದ್ದಳು. ಆದರೂ ಸಹ ತನ್ನಂತೆ ಇನ್ನೊಬ್ಬ ತಾಯಿ ಇವಳು ಎಂಬ ಮಾನವೀಯತೆಯನ್ನೇ ಮರೆಯುತ್ತಾಳೆ. ಕಲಿಕ ಯಯಾತಿ, ಚಿಕ್ಕಮಗುವಿದ್ದಾಗ ತನ್ನ ಎದೆಯಾಲನ್ನು ಕುಡಿದು ಬೆಳೆಸಿದವಳೆಂದೇ ಕಲಿಕಾ ಇವತ್ತು ತನ್ನ ಮಗಳಿಗಾಗಿ ಕಣ್ಣೀರಿಡುವ ಸ್ಥಿತಿಯನ್ನೂ ಆಕೆಯ ನೋವನ್ನು ಯಾರೂ ಕೂಡ ಶಮನ ಮಾಡಲಾರರು. ಅಂದು ಯಯಾತಿಗೆ ಹಾಲು ಕುಡಿಸಿ ಬೆಳೆಸದೇ ಇದ್ದಿದ್ದರೆ ಇಂದು ರಾಜಮಾತೆಗೆ ಯಾವ ಅಭೀಷಕದಿಂದಲೂ ಸಂತಸವಾಗಿರುತ್ತಿರಲಿಲ್ಲ.

ಅಲಕೆ ಕಲಿಕರಂತೆ ಮುಕುಲಿಕೆ ಕೂಡ ಒಬ್ಬ ದಾಸಿಯಾಗಿದ್ದಾಳೆ. ಅವಳು ತುಂಬಾ ಚಟುವಟಿಕೆಯಿಂದ ಕೂಡಿದವಳಾಗಿದ್ದಾಳೆ. ಯಯಾತಿಗೆ ಅಲಕೆಯ ಅನಂತರದ ಪ್ರೀತಿಯ ಸವಿಯನ್ನು ಕೊಟ್ಟವಳಾಗಿದ್ದಾಳೆ. ಹೆಣ್ಣಿನ ಸೌಂದರ್ಯವನ್ನು ಯಯಾತಿ ಈಕೆಯಿಂದ ಮನಸಾರೆ ಆಸ್ವಾದಿಸಿದ್ದಾನೆ. ಯಯಾತಿ ತನ್ನ ತಂದೆಯು ಅನಾರೋಗ್ಯದಿಂದ ಇರುವಾಗ ಅದರ ನೋವು ಯುವರಾಜನಿಗೆ ತಿಳಿಯಬಾರದೆಂದೇ ಅಶೋಕ ವನದಲ್ಲಿರಲು ಯಯಾತಿಗೆ ವ್ಯವಸ್ಥೆಯನ್ನು ಮಾಡಿರುತ್ತಾರೆ. ರಾಜಮಾತೆ ಆ ಸಂದರ್ಭದಲ್ಲಿ ಯುವರಾಜನ ಸೇವೆಗೆಂದು ಮುಕುಲಿಕೆಯನ್ನು ನೇಮಕ ಮಾಡಿರುತ್ತಾಳೆ. ಸೇವೆಯ ಸಂದರ್ಭದಲ್ಲಿ ಮುಕುಲಿಕೆ ಮತ್ತು ಯಯಾತಿಯ ಸಮಾಗಮವಾಗುತ್ತದೆ. ಆದರೆ ಮುಕುಲಿಕೆ ಏನೂ ನಡೆದಿಲ್ಲವೆಂಬಂತೆ ವರ್ತಿಸುತ್ತಾಳೆ. ಆದರೆ ಯಯಾತಿಗೆ ಆ ನೆನಪುಗಳು ಮರುಕಳಿಸುತ್ತಲೇ ಇರುತ್ತವೆ. ಮುಕುಲಿಕೆಯ ಬಾಹುಪಾಶದ ಸುಖವನ್ನನುಭವಿಸಿದ ಯಯಾತಿ ಕೊನೆಯಲ್ಲಿ ಅದೇ ಮುಕುಲಿಕೆಯಿಂದ ಮೋಸದ ಜಾಲಕ್ಕೆ ತಳ್ಳಲ್ಪಡುತ್ತಾನೆ. ಮುಕುಲಿಕೆಯ ನಾಟಕೀಯ ಮಾಯದ ಜಾಲದಲ್ಲಿ ಹಲವಾರು ಹೆಣ್ಣುಗಳು ಕಾಮುಕನ ಬಲೆಗೆ ಸಿಕ್ಕಿ ತಮ್ಮ ಜೀವನವನ್ನೇ ಕಳೆದುಕೊಳ್ಳುತ್ತವೆ.

ಯಯಾತಿಯ ದೌರ್ಬಲ್ಯವನ್ನು ತಮ್ಮ ಬಂಡವಾಳವಾಗಿಸಿಕೊಂಡು ತಮಗೆ ಎಷ್ಟರಮಟ್ಟಿಗೆ ಹಾಳುಮಾಡಲು ಸಾಧ್ಯವೋ ಅಷ್ಟರ ಮಟ್ಟಿಗೆ ಯಯಾತಿಯ ಜೀವನವನ್ನು ನರಕ ಯಾತನೆ ಮಾಡುತ್ತಾರೆ. ಮಂದಾರ ಮತ್ತು ಮುಕುಲಿಕೆ ಕೆಲಸ ಮಾಡುತ್ತಾಳೆ. ಗುರುಮಹಾರಾಜರ ಹತ್ತಿರ ಕರೆದುಕೊಂಡು ಹೋಗುತ್ತಾಳೆ. ಆ ಗುರು ಮಹಾರಾಜ ಕಪಟಿ, ಲಂಪಟನಾದ ಮಂದಾರನಾಗಿದ್ದ. ಆದರೆ ಮೂರ್ಖ ಯಯಾತಿಯ ಮನಸ್ಸಿಗೆ ಅದು ತಿಳಿಯುವುದೇ ಇಲ್ಲ. 'ಮದಿರೆ ಮತ್ತು ಮದಿರಾಕ್ಷಿಯನ್ನು ಕೊಟ್ಟು ಅವನಿಗೆ ಇನ್ನಷ್ಟು ದಾರಿ ತಪ್ಪಿಸುತ್ತಾರೆ. ಮಂದಾರ ಜನರ ದಾರಿ ತಪ್ಪಿರುವ ಸ್ವಾಮೀಜಿಯಾಗಿದ್ದಾನೆ. ದೇವರು, ಧರ್ಮದ ಹೆಸರಿನಲ್ಲಿ ಭ್ರಷ್ಟಾಚಾರ, ಮೋಸ, ಸುಲಿಗೆ ಮಾಡುವ ತಲೆಹಿಡುಕ ಸ್ವಾಮೀಜಿಯರ ವ್ಯಕ್ತಿತ್ವವನ್ನು ಚಿತ್ರಿಸಲಾಗಿದೆ.

ಮುಕಲಿಕೆಯು ವೇಶ್ಯಾವಾಟಿಕೆ ನಡೆಸಲು ತಾಳಹಾಕುವ ಮತ್ತು ಅದನ್ನು ಪ್ರೋತ್ಸಾಹಿಸುವ ಒಬ್ಬ ಪ್ರತಿನಿಧಿಯಂತೆ ಕಾಣುತ್ತಾಳೆ. ಮುಕುಲಿಕೆಯಂತಹ ಎಷ್ಟೋ ಹೆಂಗಸರು ಮುಖವಾಡ ಧರಿಸಿ ತಮ್ಮ ಮಾಯಾಜಾಲದಿಂದ ಎಷ್ಟೋ ಅಮಾಯಕ ಹೆಣ್ಣು ಮಕ್ಕಳು ಬಲಿಯಾಗುತ್ತಿವೆ. ಅವುಗಳನ್ನು ತಡೆಯಲು ಎಂತಹ ಕಟ್ಟುನಿಟ್ಟು ಕ್ರಮ ಕೈಗೊಂಡರೂ ಸಹ ಹೊಸ ಹೊಸ ವಿಧಾನಗಳನ್ನು, ತಂತ್ರಗಳನ್ನು ಉಪಯೋಗಿಸಿ ವೇಶ್ಯವಾಟಿಕೆಯನ್ನು ನಡೆಸುತ್ತಿರುವುದು ಕಂಡುಬರುತ್ತಿದೆ.

ಮುಕುಲಿಕೆಯಂತಹ ಮಾಯಾವಿಯರಿಗೆ ಎಷ್ಟೋ ಅಮಾಯಕ ಹೆಣ್ಣು ಮಕ್ಕಳು ಮಾಧವಿ ಮತ್ತು ತಾರಕೆಯರಂತಹ ಮುಗ್ಧರು ಬಲಿಪಶುವಾಗುತ್ತಿದ್ದಾರೆ. ಇದಕ್ಕೆ ಕೇವಲ ಮುಕುಲಿಕೆಯಂತಹ

ಪ್ರತಿನಿಧಿಗಳು ಮಾತ್ರವಾಗಿರದೆ ಯಯಾತಿಯಂತಹ ಕಾಮಾಂಧ, ಲಂಪಟರು ಈ ಸಮಾಜದಲ್ಲಿ ಇರುವುದರಿಂದ ದಿನೇ ದಿನೇ ಹೆಣ್ಣಿನ ಮೇಲೆ ಅತ್ಯಾಚಾರ, ಕೊಲೆ, ದೌರ್ಜನ್ಯ ನಡೆಯುತ್ತಿರುವುದು ಕಾಣುತ್ತೇವೆ. ಮಂದಾರ ಮತ್ತು ಮುಕುಲಿಕೆಯಂತಹವರ ವಿಷಯಲಂಪಟರ ಪಾತ್ರ ಬಹಳ ಹೆಚ್ಚಾಗಿದೆ. ತನ್ನ ಆತ್ಮೀಯ ಗೆಳೆಯ ಮಾಧವನ ಪ್ರೇಯಸಿ ಮಾಧವಿಯನ್ನು ಅವನ ಅಣ್ಣನ ಮಗಳು ತಾರಕೆ ಇವರಿಬ್ಬರನ್ನೂ ಯಯಾತಿ ತನ್ನ ಪ್ರೀತಿ ಎಂಬ ಕಾಮದ ಸುಳಿಯಲ್ಲಿ ಸಿಲುಕಿಸಿ ಬೆಂಕಿಗೆ ತಗುಲಿದ ಹೂವು ಬಾಡಿಹೊದದ್ದು ಎಂದೂ ಮತ್ತೆ ಅರಳುವುದಿಲ್ಲವೋ ಹಾಗೇ ತಾರಕೆ ಹುಚ್ಚಿಯಾಗಿ ಬೆಂಕಿಗಾಹುತಿಯಾದರೆ ತನ್ನ ಶೀಲವನ್ನು ಕಳೆದುಕೊಂಡ ಆ ಮುಗ್ಧ ಬಾಲೆ ಯಮುನಾ ನದಿಯ ಪಾಲಾಗುತ್ತಾಳೆ. ಇಂತಹ ಇನ್ನೊಂದು ಹೆಣ್ಣು ಅಲಕೆಯ ಚಿಕ್ಕಮ್ಮನ ಮಗಳು ಅಲಕೆಯನ್ನೂ ಸಹ ಯಯಾತಿಯ ಕಾಮತೃಷೆಗೆ ಬಲಿಕೊಡಲು ಮತ್ತು ಬರಿಸುವ ಒಂದು ಪಾನೀಯವನ್ನು ಕೊಟ್ಟು ಅವಳಿಗೆ ಯಯಾತಿಯ ಕೊಠಡಿಗೆ ಕಳುಹಿಸಲಾಗುತ್ತದೆ. ‘ಮಂದಾರ ಮತ್ತು ಮುಕುಲಿಕೆಯ ಮೇಲೆ ನನಗೆ ಕೋಪ ಬಂದಿತು. ಇಷ್ಟರಮಟ್ಟಿಗೆ ಆಕೆಗೆ ಮತ್ತು ಭರಿಸುವ ಔಷಧಿಯನ್ನು ಕೊಡುವುದಕ್ಕೆಂದು ಯಾರು ಹೇಳಿದ್ದರು?’[೯].

ಇನ್ನು ಇಡೀ ಕಾದಂಬರಿಯ ತುಂಬೆಲ್ಲ ಶರ್ಮಿಷ್ಠೆಯ ದಾಸಿಯ ಜೀವನವನ್ನು ಪುಟ ಪುಟಗಳಲ್ಲಿ ಜೀವಂತವಾಗಿ ವಿವರಿಸಲಾಗಿದೆ. ಆಕೆ ತನ್ನ ಜೀವನವನ್ನು ದುಃಸ್ತರವಾಗಿಯೇ ಕಳೆಯುತ್ತಾಳೆ (ಕಳೆದಿದ್ದಾಳೆ) ಎನ್ನುವುದಕ್ಕೆ ಆಕೆಯ ಅನುಭವದ ಮಾತುಗಳೇ ಸಾಕ್ಷಿ. ದಾಸಿಯಾದವರು ಹೇಗಿರುತ್ತಾರೆ, ಹೇಗಿರಬೇಕು? ಅವರ ಚಲನವಲನಗಳು ಎಂತಹವಾಗಿರುತ್ತವೆ ಎಂಬುದನ್ನು ಕಾದಂಬರಿಯು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದೆ. ತಾನು ದಾಸಿಯಾಗಬೇಕು ಎಂದುಕೊಂಡಾಗ ಆಕೆ ತನ್ನ ಮನಸ್ಸನ್ನು ಹೀಗೆ ಗಟ್ಟಿಗೊಳಿಸಿಕೊಳ್ಳುತ್ತಾಳೆ. ‘ನಾನೊಬ್ಬ ಕಿವುಡ ಎಂಬಂತೆ ಅವನ್ನು (ನಿಷ್ಠುರವಾದ, ಅವಹೇಳನಕಾರಿ ಯಾದ ದೇವಯಾನಿಯ ಮಾತುಗಳು) ಕಿವಿಗೆ ಹಾಕಿಕೊಳ್ಳುತ್ತಿರಲಿಲ್ಲ. ಹಗಲಿರುಳೂ ನನ್ನದು ಒಂದೇ ಒಂದು ಮಂತ್ರ ನಾನು ದಾಸಿ; ದಾಸಿಗೆ ಕೈಗಳಿರುತ್ತವೆ; ಕಾಲುಗಳಿರುತ್ತವೆ’[೧೦] ಎನ್ನುವುದು ದಾಸಿಯರ ಬಾಳಿನ ದಾರುಣತೆಗೆ ಸಾಕ್ಷಿಯಾಗಿದೆ. ಸಾಮಾನ್ಯ ಜನರ ಜೀವನ ಸ್ಥಿತಿ ಎಷ್ಟು ಕರುಣಾಜನಕವಾಗಿರುತ್ತದೆ ಎಂಬುದು ಶರ್ಮಿಷ್ಠೆಯ ಜೀವನವನ್ನು ನೋಡುತ್ತಾ ಹೋದಾಗ ಅನಾವರಣಗೊಳ್ಳುತ್ತದೆ. ತಾನು ದೇವಯಾನಿಯ ದಾಸಿಯಾದಾಗಿನಿಂದ ತನ್ನ ಆಸೆ, ಆಕಾಂಕ್ಷೆ, ಕನಸು ಎಲ್ಲವೂ ಕಮರಿ ಹೋಗುತ್ತವೆ. ಆದರೂ ತಾನೂ ಕೂಡ ಒಂದು ಹೆಣ್ಣುಜೀವ. ತನಗೂ ಭಾವನೆಗಳಿವೆ ಎಂಬುದು ಅವಳಿಗೆ ಮತ್ತೆ ಮತ್ತೆ ನೆನಪಿಗೆ ಬರುತ್ತಿದ್ದವು. ಇಪ್ಪತ್ತರ ಒಳಹೊರಗಿನ ಯಾವ ಯುವತಿ ಅಂತಹ ಅಸ್ಪಷ್ಟ ಮಧುರವಾದ ಕನಸುಗಳನ್ನು ಮೆಲುಕು ಹಾಕುವುದರಲ್ಲಿ

ಸಂತೋಷಪಡುವುದಿಲ್ಲ? ಅಂತಹ ಕನಸುಗಳು ಇದ್ದರೂ ಸಹ ಅವು ಯಾವುವೂ ನಮಗೆ ಆಪ್ಯಾಯಮಾನವಲ್ಲ ಎಂಬಂತೆ ಇರಬೇಕಾದ ಪರಿಸ್ಥಿತಿಯನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ.

ಮನುಷ್ಯ ಎಷ್ಟೇ ಕಷ್ಟ ಅಥವಾ ಸುಖ ಜೀವಿಯಾಗಿರಲಿ ಅವರಿಗೆ ಒಬ್ಬ ಗೆಳೆಯ, ಗುರು, ಮಾರ್ಗದರ್ಶಕರು ಇದ್ದಾಗ ಅವರು ಜೀವನವನ್ನು ಉತ್ತಮವಾಗಿ ಮತ್ತು ಧೈರ್ಯವಾಗಿ ನಡೆಸಲು ಸಾಧ್ಯವಾಗುತ್ತದೆ ಎಂಬುದಕ್ಕೆ ಶರ್ಮಿಷ್ಠೆಗೆ ಈತನ ಮಾತುಗಳು ಸ್ಫೂರ್ತಿಯಾಗುತ್ತವೆ. 'ರಾಜಕನ್ಯೆ ಬದುಕು ಎಂದಿಗೂ ಅಪೂರ್ವವೇ. ಹಾಗಿರುವುದರಲ್ಲಿಯೇ ಸಾಗಿರುತ್ತದೆ ಎಂಬುದು ಆ ಹಿಂದಿನ ಹಂತವನ್ನು ದಾಟಿ ಮುಂದೆ ಸಾಗಿದಾಗ ತಿಳಿಯುತ್ತದೆ. ಅರಮನೆಗೆ ದಾಸಿಯಾಗಿ ಬಂದಾಗ ಶರ್ಮಿಷ್ಠೆಗೆ ಯಾವ ಕೆಲಸವನ್ನು ಹೇಳಲು ಹಿಂಜರಿಯುತ್ತಿದ್ದರು, ಅದಕ್ಕೆ ಉದಾಹರಣೆ ಎಂದರೆ ಮಹಾರಾಜರಿಗೆ ಏನಾದರೊಂದು ಅವರ ಹತ್ತಿರ ಹೋದರೆ 'ನೀನು ಯಾತಕ್ಕೆ ತೆಗೆದುಕೊಂಡು ಬರಬೇಕಾಗಿತ್ತು? ದಾಸಿಗೆ ಹೇಳಿದ್ದರಾಗುತ್ತಿತ್ತು'[೧೧] ಎಂದು ಹೇಳುತ್ತಿರುವಾಗಲೇ ನಕ್ಕು ನಾನು ದಾಸಿಯೇ ಎಂದರೂ 'ನೀನು ದೇವಯಾನಿಯ ದಾಸಿಯಾಗಿರಬಹುದು. ನನ್ನ ದಾಸಿಯಲ್ಲ' ಎನ್ನುತ್ತಾನೆ. ಅರಮನೆಯಲ್ಲಿ ನಡೆಯುವಂತಹ ಕೆಲವು ಚಟುವಟಿಕೆಗಳು ಗೌಪ್ಯವಾಗಿದ್ದರೂ ಸಹ ಅವುಗಳಲ್ಲಿ ಕೆಲವು ಅಲ್ಲಿಯ ಸಾಮಾನ್ಯ ಜನರಿಗೆ ತಿಳಿದಿರುತ್ತವೆ. ಹಸ್ತಿನಾಪುರದ ಅರಮನೆಯಲ್ಲಿ ಮುದುಕಿಯೊಬ್ಬಳು ದೇವಯಾನಿಗೆ ಮೊದಲು ನಡೆದಂತಹ ಎಲ್ಲಾ ಘಟನಾವಳಿಗಳ ಬಗ್ಗೆ ವಿವರವಾಗಿ ತಿಳಿಸುತ್ತಾಳೆ. ತನ್ನ ಸೊಸೆಗೆ ತಿಳಿಸದೇ ಬಚ್ಚಿಟ್ಟಿದ್ದ ವಿಷಯಗಳು ಆ ಮುದುಕಿಯಿಂದ ದೇವಯಾನಿಗೆ ತಿಳಿದ ವಿಷಯಗಳೇ ನಿದರ್ಶನವಾಗಿವೆ. 'ಅರಮನೆಯಲ್ಲಿನ ದಾಸಿಯರೇನೂ ಕಡಿಮೆಯವರಲ್ಲ! ಅವರಲ್ಲಿಯ ಮುದುಕಿಯೊಬ್ಬಳು ಇದನ್ನೆಲ್ಲ ನನಗೆ ಮೊದಲ ದಿನವೇ ಹೇಳಿದಳು!'[೧೨] ಗುಪ್ತಚರ ಕೆಲಸಗಳನ್ನೂ ದಾಸಿಯರು ಮಾಡುತ್ತಿದ್ದರೆನ್ನುವುದು ಇದರಿಂದ ತಿಳಿದುಬರುತ್ತದೆ.

ಶರ್ಮಿಷ್ಠೆ ಹಾಗೂ ಯಯಾತಿಯ ಗುಪ್ತ ಸಂಬಂಧದ ಬಗ್ಗೆ ತಿಳಿದ ದೇವಯಾನಿ ಅವಳನ್ನು ಕೊಲೆಗೈಯ್ಯುವ ಯತ್ನ ನಡೆಸುತ್ತಾಳೆ ಹಾಗೂ ಅದರಲ್ಲಿ ಅವಳು ವಿಫಲಳಾಗುತ್ತಾಳೆ. ನೆಲಮನೆಗೆ ಗುಪ್ತಮಾರ್ಗದೊಳಗಿಂದ ದೇವಯಾನಿ ಶರ್ಮಿಷ್ಠೆಯನ್ನು ಕರೆದೊಯ್ದಳು. 'ಆಕೆ ಚಿಕ್ಕ ಕೋಣೆಯ ನಾಲ್ಕು ಗೋಡೆಗಳು ಎಂತಹ ಭಯಂಕರ ಕಥೆಗಳನ್ನು ಹೇಳತೊಡಗಿದ್ದವು! ಕಾಮುಕ ರಾಜರ ಪ್ರೇಮ, ಸವತಿಯ ಮತ್ಸರ, ಮನೆತನದ ಪ್ರತಿಷ್ಠೆಗಾಗಿ ಮಾಡಿದ ಕೊಲೆ, ನಿರಪರಾಧಿಯಾದ ತರುಣಿಗೆ ಕುಡಿಸಿದ ವಿಷ'[೧೩] ಪರಂಪರಾಗತವಾಗಿ ನಡೆದುಬಂದಿದ್ದ ಸವತಿ ಮತ್ಸರಕ್ಕೆ ಶರ್ಮಿಷ್ಠೆ ಕೂಡ ಈ ಸಂದರ್ಭದಲ್ಲಿ ಬಲಿಯಾಗಿದ್ದಳು. ಯಾರೋ ಮಾಡಿದ್ದ ತಪ್ಪಿಗೆ ಈಕೆ ಶಿಕ್ಷೆಯನ್ನು

ಅನುಭವಿಸಬೇಕಾಗಿ ಬಂದಿತು. ಹಲವಾರು ನಿರಪರಾಧಿಗಳು ಅಲ್ಲಿ ಬಲಿಯಾಗಿದ್ದರೆನ್ನುವುದಕ್ಕೆ ಅಲಕೆಯೇ ಜೀವಂತ ಸಾಕ್ಷಿಯಾಗಿದ್ದಾಳೆ.

ಬಡವರ ಸಿಟ್ಟು ಮತ್ಸರಗಳು ಗೋಚರಿಸುತ್ತವೆ ಮತ್ತು ಬಹಿರಂಗವಾಗಿ ನಡೆದುಹೋಗುತ್ತವೆ. ಆದರೆ ಶ್ರೀಮಂತರ ಕೆಂಗಣ್ಣಿಗೆ ಬಲಿಯಾದರೆ ಆ ದಾರುಣ ಸಾವುಗಳು ಯಾರಿಗೂ ಕಾಣದಂತೆ, ಕೇಳದಂತೆ ನಡೆದೇ ಹೋಗುತ್ತವೆ. ರಾಜ್ಯವನ್ನಾಳುವಂತಹ ಜನರಿಗೆ ನ್ಯಾಯವನ್ನು ನೀಡುವಂತಹವರೇ ಅನ್ಯಾಯವನ್ನು ಮಾಡಿದರೆ 'ಬೇಲಿಯೇ ಎದ್ದು ಹೊಲ ಮೇಯ್ದಂತೆ' ಹೇಗಿರುತ್ತದೋ? ಹಾಗೆ ಇಲ್ಲಿಯ ಪರಿಸ್ಥಿತಿಯನ್ನು ಕಾಣುತ್ತೇವೆ.

ಶರ್ಮಿಷ್ಠೆಯನ್ನು ಪಾರುಮಾಡಿದ ನಂತರ ಮಾಧವನು ಮಳೆಯಿಂದ ನೆನೆದು ಜ್ವರ ಬಂದು, ಹಾಸಿಗೆಯಲ್ಲಿ ಮಲಗಿ, ನಂತರ ಜೀವ ಬಿಡುತ್ತಾನೆ. ರಾಮಾಯಣದಲ್ಲಿ ಸೀತೆ ರಾಮನ ಶಂಕೆಗೆ ಒಳಗಾಗಿ ಕಾಡುಮೇಡಲ್ಲಿ ವನವಾಸ ಅನುಭವಿಸುವಂತೆ ಶರ್ಮಿಷ್ಠೆಯಾದರೂ ಹಾಗೆಯೇ ಅವಳು ತನ್ನ ಹಸುಗೂಸು ಪುರುವಿಗಾಗಿ ತನ್ನ ಜೀವವನ್ನು ಉಳಿಸಿಕೋಳ್ಳಬೇಕಾಗಿತ್ತು. ತನ್ನ ಮಗನ ಜೀವ ರಕ್ಷಣೆಗಾಗಿ ಮತ್ತು ದೇವಯಾನಿಯ ಸೇಡಿನಿಂದ ಅವನನ್ನು ಪಾರು ಮಾಡುವುದಕ್ಕಾಗಿ ಆಕೆ ಪಟ್ಟ ಕಷ್ಟ ಅಷ್ಟಿಷ್ಟಲ್ಲ.

ಒಬ್ಬ ತಾಯಿಯಾದವಳಿಗೆ ತನ್ನ ಮಗುವೊಂದಿದ್ದರೆ ಆಕೆಗೆ ಅದೇ ಪ್ರಪಂಚ. ತನ್ನ ಕೈಹಿಡಿದ ಗಂಡ, ಸಂಸಾರದಲ್ಲಿನ ಜಂಜಾಟವನ್ನು ಆ ಕಂದನ ಲಾಲನೆ, ಪಾಲನೆಯಲ್ಲಿ ಕಳೆಯುತ್ತಾಳೆ. ಆ ಮಗುವಿಗೆ ಏನೊಂದಾದರೂ ಸೈರಿಸಿಕೊಂಡು ತಾಯಿಯಾಗಿರುತ್ತಾಳೆ. ಆದರೆ ಅಂತಹ ತಾಯಂದಿರಿಗೆ ಮುಪ್ಪಿನ ಕಾಲದಲ್ಲಿ ದೂರವಿರಿಸಿ ನೋವನ್ನು ನೀಡುವವರೆ ಹೆಚ್ಚು. ಆ ತಾಯಿ ಮಗುವಿಗಾಗಿ ತನ್ನ ಪ್ರಾಣವನ್ನೂ ಸಹ ಲೆಕ್ಕಿಸಲಾರಳು.

ಹಸ್ತಿನಾಪುರದಿಂದ ಹೊರಬಂದ ಶರ್ಮಿಷ್ಠೆ ತಾನು ಅಸ್ತಿತ್ವವನ್ನು ಹುಡಿಕಿಕೊಳ್ಳಲು ಹಗಲು ಇರುಳೆನ್ನದೆ ಅಲೆದಾಡುತ್ತಾಳೆ. ದೇವಯಾನಿಯೂ ಶರ್ಮಿಷ್ಠೆಯನ್ನು ಹುಡುಕಿ ಕೊಟ್ಟವರಿಗೆ ದೊಡ್ಡ ಬಹುಮಾನ ನೀಡುವುದಾಗಿ ಡಂಗುರ ಸಾರಿಸಿದ್ದಳು. ಇದರಿಂದ ಹಸ್ತಿನಾಪುರದಿಂದ ಬಹುದೂರ ಸಾಗಬೇಕೆಂದು ಮನಸ್ಸಿನಲ್ಲಿಯೇ ದಿನದಿನಕ್ಕೂ ಗಟ್ಟಿಮಾಡಿಕೊಳ್ಳುತ್ತಿದ್ದಳು. ಹೀಗೆ ಹೋಗುವ ಸಂದರ್ಭದಲ್ಲಿ ಒಂದು ದೇವಾಲಯದಲ್ಲಿ ಆಶ್ರಯ ಪಡೆದಾಗ 'ಒಬ್ಬ ಕರುಣಾಳು ಹೆಂಗಸೊಬ್ಬಳು ತನ್ನನ್ನು ಮನೆಗೆ ಕರೆದುಕೊಂಡು ಹೋದಳು. ಆಕೆಯ ಮನೆಯಲ್ಲಿ ನಾಲ್ಕು ದಿನ ಸುಖವಾಗಿ

ಕಳೆದವು. ಆದರೆ ಹಸ್ತಿನಾಪುರದಿಂದ ದೂರ ಹೋಗಬೇಕೆಂಬ ಹಂಬಲ ಗಟ್ಟಿಗೊಳಿಸಿಕೊಂಡೇ ಇದ್ದಳು. ಆ ಹೆಂಗಸು ತುಂಬಾ ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದಳು'[೧೪].

ಒಬ್ಬ ಹೆಣ್ಣಿನ ಮನಸ್ಸು ಆಕೆಯ ನೋವು ಇನ್ನೊಬ್ಬ ಹೆಣ್ಣು ಹೃದಯಕ್ಕೆ ಮಾತ್ರ ಅರ್ಥವಾಗುತ್ತದೆ. ನಾವು ಸಹೃದಯರಾಗಿದ್ದಾಗ ಮಾತ್ರ ಇನ್ನೊಂದು ಜೀವದ ಸಂಕಟ ಅರ್ಥವಾಗಲು ಸಾಧ್ಯವಾಗುತ್ತದೆ. ಶರ್ಮಿಷ್ಠೆಯನ್ನು ಕರೆದು ತಂದ ಆ ಕರುಣಾಳು ಹೆಂಗಸಿನ ಮನೆಯಲ್ಲಿ ಸಿರಿತನವಿಲ್ಲದಿದ್ದರೂ ಹೃದಯದಲ್ಲಿ ಪ್ರೀತಿಯೆಂಬ ಸಿರಿತನ, ಹೃದಯ ವೈಶಾಲ್ಯತೆ ಇತ್ತು ಎಂಬುದನ್ನು ತಿಳಿಯಬಹುದು. ಆದರೆ ಅದೇ ಹೆಂಗಸಿನ ಪತಿ ಶರ್ಮಿಷ್ಠೆಯನ್ನು ಕಾಮುಕ ದೃಷ್ಟಿಯಿಂದ ನೋಡಿದನು. ಪರ ಸ್ತ್ರೀಯಾದರೂ ಸಹ ಕಾಮಾಂಧರಿಗೆ ಅದ್ಯಾವುದೂ ಅರಿವಿಗೆ ಬರಲಾರದು. ಆದ್ದರಿಂದ ಸಮಾಜದಲ್ಲಿ ಹೆಣ್ಣಿಗೆ ಯಾವ ಸ್ವಾತಂತ್ರ್ಯವಿಲ್ಲದೆ ಚಿಪ್ಪೊಳಗಿನ ಆಮೆಯಂತೆ ಜೀವನ ಸಾಗಿಸಬೇಕಾದ ದುಃಸ್ಥಿತಿ ಒದಗಿದೆ.

ಹೆಣ್ಣು ಸುಂದರವಾಗಿದ್ದರೂ ಕಷ್ಟ, ಕುರೂಪಿಯಾಗಿದ್ದರೂ ಕಷ್ಟ. ಒಟ್ಟಿನಲ್ಲಿ ಹೆಣ್ಣು ಒಂದು ಭೋಗದ ವಸ್ತುವಾಗಿಯೇ ಕಾಣುತ್ತಾಳೆ. ಅವಳೂ ಮನುಷ್ಯಳು, ಅವಳಿಗೂ ಭಾವನೆಗಳಿವೆ, ಹೃದಯ ವೈಶಾಲ್ಯತೆ ಇದೆ, ಸ್ವತಂತ್ರವಾಗಿ ಜೀವಿಸುವ ಹಕ್ಕಿದೆ ಎಂಬುದನ್ನು ಮರೆತು ಆಕೆಯನ್ನು ನಿರ್ದಯೆಯಿಂದ ನಡೆಸಿಕೊಳ್ಳುತ್ತಾರೆ.

ತನ್ನ ನೆಲೆಯನ್ನು ಹುಡುಕುತ್ತಾ ಶರ್ಮಿಷ್ಠೆ ಮುಂದುವರೆಯುತ್ತಾಳೆ. ಮೊದಲಿನಂತೆಯೇ ಬಹುದೂರ ಬಂದ ಶರ್ಮಿಷ್ಠೆಗೆ ಒಬ್ಬ ಸಿರಿವಂತ ವೃದ್ಧ ವಿಧವೆಯ ಮನೆಯಲ್ಲಿ ಆಶ್ರಯ ಸಿಕ್ಕಿತು. ಆಕೆ 'ಯಾರು ನೀನು ಮಗಳೇ? ಎಲ್ಲಿಯವಳು?' ಎಂದು ಮತ್ತೆ ಮತ್ತೆ ಕೆದಕಿಕೇಳಿದಳು. ಮೊದಲೇ ನಿಶ್ಚಯಿಸಿಕೊಂಡಿದ್ದ ಉತ್ತರವನ್ನು ಹೇಳಿದಳು. ಆಕೆ 'ನಕ್ಷತ್ರದಂತಹ ಹೆಂಡತಿಯನ್ನು ಬಿಟ್ಟು ಸನ್ಯಾಸಿಯಾದನೆ ನಿನ್ನ ಗಂಡ? ಏನೇನಿರುತ್ತದೆಯೋ ಒಬ್ಬೊಬ್ಬರ ಹಣೆಯ ಬರಹದಲ್ಲಿ?'[೧೫] ಎಂದಳು. ಎಷ್ಟೋ ಕುಟುಂಬದಲ್ಲಿ ಗಂಡ ಇದ್ದೂ ಇಲ್ಲದಂತಹ ಸ್ಥಿತಿಯನ್ನು ಕಾಣುತ್ತೇವೆ. ಮನೆಯ ಜವಾಬ್ದಾರಿಯನ್ನು ನಿರ್ವಹಿಸಬೇಕಾದವರೇ ಎಲ್ಲವನ್ನೂ ಕೈ ಚೆಲ್ಲಿ ಸಂಬಂಧವಿಲ್ಲದಂತೆ ಇರುತ್ತಾರೆ. ಇಂತಹ ಸಂದರ್ಭದಲ್ಲಿ ಮಹಿಳೆಯೇ ಆ ಎಲ್ಲಾ ಜವಾಬ್ದಾರಿಯನ್ನು ಹೊತ್ತು ನಿಭಾಯಿಸುತ್ತಾಳಾದರೂ ಪತಿ ಇದ್ದು ಇಲ್ಲದಂತೆ ಜೀವನ ನಡೆಸುವುದು ದುರದೃಷ್ಟಕರವಾದ ಸಂಗತಿ.

ಇಲ್ಲಿ ಶರ್ಮಿಷ್ಠೆಯಾದರೋ ಹಾಗೆಯೆ ತನ್ನ ಪತಿ ಪರಾಕ್ರಮಿ. ಹಸ್ತಿನಾಪುರದ ಮಹಾರಾಜನಾಗಿದ್ದರೂ ಕೂಡ ತನ್ನ ಗಂಡ ಸನ್ಯಾಸಿ ಎಂದು ಹೇಳಿಕೊಂಡು ಒಳಗೊಳಗೆ ಆಕೆ

ಎಷ್ಟು ಸಂಕಟವನ್ನು, ನೋವನ್ನು ಅನುಭವಿಸುತ್ತಾಳೋ ಆಕೆಗೇ ಗೊತ್ತು. ಆದರೆ ಅದೇ ಶ್ರೀಮಂತ ವೃದ್ಧೆ ದೇವಯಾನಿ ಪ್ರಕಟಿಸಿದ್ದ ಬಹುಮಾನದ ಆಸೆಗಾಗಿ ಶರ್ಮಿಷ್ಠೆಯನ್ನು ಪದೇ ಪದೇ ನೋಡುತ್ತ ರಾತ್ರಿ ಸಮಯದಲ್ಲಿ ಅದನ್ನು ಖಚಿತಪಡಿಸಿಕೊಳ್ಳಲಾರದೆ ತಮ್ಮ ತಮ್ಮಲ್ಲೇ ಕಿತ್ತಾಡುವುದು ಕಾಣುತ್ತದೆ.

ಶರ್ಮಿಷ್ಠೆಗೆ ಯತಿಯಿಂದ ಒಂದು ನೆಲೆಸಿಗುತ್ತದೆ. ಪುರು ಕೂಡ ಹದಿನಾರು ವರ್ಷದವನಾದಾಗ ಆತ ಒಬ್ಬ ಸಾಮಾನ್ಯ ಕುವರನಾಗಿರದೆ ಹಸ್ತಿನಾಪುರದ ರಾಜಪುತ್ರನಾಗಿದ್ದನೆಂಬ ರಹಸ್ಯವನ್ನು ಆತನಿಗೆ ಶರ್ಮಿಷ್ಠೆ ತಿಳಿಸುತ್ತಾಳೆ. ಶರ್ಮಿಷ್ಠೆಯು ಹೊನ್ನಬಣ್ಣದ ಕೇಶರಾಶಿಯ ಆ ಮುದ್ದು ಹುಡುಗಿ ಅಲಕಾ ತನ್ನ ಮಗ ಪುರುವನ್ನು ಪ್ರೀತಿಸುತ್ತಿದ್ದಾಳೆ ಎಂದು ತಿಳಿದಾಗ ಆಕೆಯ ಪ್ರೀತಿಯನ್ನು ಚಿವುಟಿ ಹಾಕುವ ಯೋಚನೆ ಆಕೆಗೆ ಸುಳಿಯದೆ ಇರಲಿಲ್ಲ. ಒಂದು ಕಡೆ ಆ ಪ್ರೀತಿಯಿಂದ ಕೊನೆಯಲ್ಲಾಗುವ ನೋವನ್ನು ಯೋಚಿಸಿದರೂ ಸಹ ಇನ್ನೊಂದೆಡೆ ತಾಯಿಯ ಅಧಿಕಾರವನ್ನು ಇಲ್ಲಿ ಕಾಣುತ್ತೇವೆ. 'ಈ ಅಲಕೆಯ ಚಿಕ್ಕಮ್ಮ ಹಿಂದೆ ಹಸ್ತಿನಾಪುರದ ಅರಮನೆಯಲ್ಲಿ ದಾಸಿಯಾಗಿದ್ದಳಂತೆ. ಇಂತಹ ಕುಲದಲ್ಲಿಯ ಈ ಹುಡುಗಿ ರಾಜಕುಲದಲ್ಲಿಯ ಪುರು, ನೆಲದ ಮೇಲಿನ ಹಣತೆ, ಆಕಾಶದಲ್ಲಿಯ ಬೆಳದಿಂಗಳಾಗಲು ಹಾತೊರೆದರೆ ಹೇಗೆ?' ಶರ್ಮಿಷ್ಠೆ ಇಲ್ಲಿ ಮೊದಲಿನ ತನ್ನ ಜೀವನದ ಕ್ಷಣಗಳನ್ನು ಯೋಚಿಸದೆ ಒಬ್ಬ ತಾಯಿಯಾಗಿ ಯೋಚಿಸುತ್ತಾಳೆ. ನಾವು ಎಂತಹ ಕುಲದವರೇ ಆಗಿದ್ದರೂ ಸಹ ತಮ್ಮ ಮಕ್ಕಳಿಗೆ ಉತ್ತಮವಾದದ್ದೇ ಬೇಕು, ತಾವು ಹೇಳಿದ್ದೇ ನಡೆಯಬೇಕು ಎಂಬ ಹಠವನ್ನು ಇಲ್ಲಿಯೂ ಕೂಡ ಕಾಣುತ್ತೇವೆ.

ಅಲಕೆ ದಾಸಿಯಾಗಿದ್ದಾಳೆ. ಪುರು ರಾಜಕುಮಾರ ಎಂದು ಯೋಚಿಸುವಲ್ಲಿ ತನ್ನ ಪ್ರೀತಿಯನ್ನಿಲ್ಲಿ ಶರ್ಮಿಷ್ಠೆ ಮರೆತು ಮಾತಾಡುತ್ತಾಳೆ. ಯಾವುದೇ ತಂದೆ ತಾಯಿಯರು ತಮ್ಮ ಮಕ್ಕಳು ಪ್ರೀತಿಸುವುದು, ತಮ್ಮಿಚ್ಚೆಗೆ ತಕ್ಕಂತೆ ಮದುವೆ ಆಗುವುದನ್ನು ಸಹಿಸಲಾರರು ಎಂಬುದಕ್ಕೆ ಇದೊಂದು ಚಿಕ್ಕ ಉದಾಹರಣೆಯಾಗಿದೆ. ಶರ್ಮಿಷ್ಠೆ ಎಷ್ಟು ತ್ಯಾಗಿ, ಪರೋಪಕಾರಿ ಜೀವಿ, ಮುಗ್ಧಳು ಎಂದೆನಿಸಿದರೂ ಸಹ ಇಲ್ಲಿ ತನ್ನ ಮಗನ ವಿಷಯದಲ್ಲಿ ಒಂದೊಮ್ಮೆಯಾದರೂ ಸ್ವಾರ್ಥವನ್ನು ಸಾಧಿಸುತ್ತಾಳೆ. ಅದು ಕ್ಷಣಿಕವಾದರೂ ಸಹ ಜಾತಿ, ಕುಲದ ಪ್ರತಿಷ್ಠೆ ಇಷ್ಟೆಲ್ಲವನ್ನು ಮಾಡಿಸಿಯೇ ಮಾಡಿಸುತ್ತದೆ.

'ಒಂದು ಕಾಲಕ್ಕೆ ನೀನು ರಾಜಕನ್ಯೆಯಾಗಿದ್ದೆ. ಮುಂದೆ ನೀನು ದಾಸಿಯಾಗಲಿಲ್ಲವೇ? ಅಲಕೆಯ ಕುಲ ದೊಡ್ಡದಾಗಿರಲಿಕ್ಕಿಲ್ಲ. ಆದರೆ ಆಕೆಯ ಪ್ರೀತಿ ನಿಜವಾದದ್ದಲ್ಲವೇ? ದಾಸಿಯ ಪ್ರೀತಿ ರಾಜಕನ್ಯೆಯ ಪ್ರೀತಿಯಿಂದ ಬೇರೆಯಾಗಿರುತ್ತದೆಯೇ?'[೧೬] ಎಂದು ಅವಳ ಇನ್ನೊಂದು ಮನಸ್ಸು ಕೇಳುತ್ತಿತ್ತು. ಶರ್ಮಿಷ್ಠೆಯಲ್ಲಿನ ಉತ್ಕಟತೆಯ ಪ್ರೀತಿಗೆ ಅಲ್ಲವೆ ಯಯಾತಿ ಮನಸೋತದ್ದು? ಆಕೆಯನ್ನು

ಗಂಧರ್ವ ವಿವಾಹವಾದದ್ದು? ತನ್ನ ನಿರಪೇಕ್ಷ, ನಿರ್ಮಲವಾದ ಪ್ರೀತಿಯನ್ನು ನೀಡಿದ್ದರಿಂದಾಗಿ ಯಯಾತಿಯು ದಾಸಿಯಾಗಿದ್ದರೂ ಆಕೆಯನ್ನು ಮೋಹಿಸಿದ್ದು. ಪ್ರೀತಿ ಎಂಬುದಕ್ಕೆ ಯಾವುದೇ ಜಾತಿ, ಧರ್ಮ, ಕುಲ, ಮತ ಎಂಬುದಿರುವುದಿಲ್ಲ ಎಂಬುದು ಇಲ್ಲಿ ಅನಾವರಣಗೊಳ್ಳುತ್ತದೆ. ಇಂಥ ನಿರಪೇಕ್ಷವಾದ ಪ್ರೀತಿಯನ್ನು ತನ್ನ ಹೃದಯದಲ್ಲಿ ಹೊಂದಿದ್ದರೂ ಸಹ ಕ್ಷಣಮಾತ್ರದಲ್ಲಿ ಪುರು ಅಲಕಾಳ ಪ್ರೀತಿಯ ಬಗ್ಗೆ ತಪ್ಪಾಗಿ ಗ್ರಹಿಸಿದ್ದು ಸರಿಯೇ ಎಂಬ ಪ್ರಶ್ನೆ ಕಾಡದೆ ಇರುವುದಿಲ್ಲ.

ತನ್ನ ಮಗ ರಾಜನಾದರೆ ಅವನ ಹೆಂಡತಿಯೂ ಕೂಡ ಮಹಾರಾಣಿಯಾಗುವಳು. ಅವನಿಗೆ ಸರಿಸಮನಾದ ಕುಲದಲ್ಲಿಯೇ ಹುಡುಕಿ ತರಬೇಕೆಂಬ ಆಕೆಯ ಅಪೇಕ್ಷೆ ತಪ್ಪೇನಲ್ಲ. ಆದರೆ ಮುರಿದ ಮನಸ್ಸುಗಳ ಪ್ರೀತಿ ಎಂದಿಗೂ ದೂರಾಗಲಾರವು. ಅದಕ್ಕೆ ಯಯಾತಿ ಶರ್ಮಿಷ್ಠೆಯ ಪ್ರೀತಿಯೇ ಇಲ್ಲಿ ಸಾಕ್ಷಿಯಾಗಿದೆ.

ಯಯಾತಿ ಕಾದಂಬರಿಯು ವಿವಿಧ ಸ್ತರಗಳ ಮಹಿಳಾ ಪಾತ್ರಗಳನ್ನು ನಿರೂಪಿಸಿದೆ. ಅವುಗಳಲ್ಲಿ ಕೆಲವು ಅರಮನೆಯ ಒಳಗಿನವು ಮತ್ತೆ ಕೆಲವು ಅರಮನೆಯ ಹೊರಗಿನವು. ಯಯಾತಿಯ ತಾಯಿ ಮತ್ತು ದೇವಯಾನಿ ಇವರು ಅರಮನೆಯ ಒಳಗಿನವರು. ಶರ್ಮಿಷ್ಠೆ, ಅಲಕೆ, ಕಲಿಕಾ, ಮುಕುಲಿಕೆ ಹಾಗೂ ಇನ್ನಿತರೆ ದಾಸಿಯರು, ಅರಮನೆಯಿಂದ ತಪ್ಪಿಸಿಕೊಂಡು, ತನ್ನ ಎಳೆಗೂಸು ಪುರುವಿನೊಂದಿಗೆ ಶರ್ಮಿಷ್ಠೆಯು ಊರೂರು ಅಲೆಯುತ್ತಿದ್ದಾಗ ಎದುರಾಗುವ ಕೆಲವು ಮಹಿಳೆಯರು ಹೀಗೆ.

ಈ ಎಲ್ಲಾ ಮಹಿಳಾ ಪಾತ್ರಗಳ ಅಂತರಂಗ ಹಾಗೂ ಬಹಿರಂಗಗಳನ್ನು ಯಯಾತಿ ಕಾದಂಬರಿ ತನ್ನ ಪುಟಪುಟಗಳಲ್ಲಿ ಅತ್ಯಂತ ಸೂಕ್ಷ್ಮವಾಗಿ ನಿರೂಪಿಸಿದೆ. ಎಲ್ಲಿಯೂ ಕೂಡ ಯಾವ ಮಹಿಳಾ ಪಾತ್ರವನ್ನೂ ಸರಳೀಕರಿಸಿಲ್ಲ. ಮಹಿಳೆಯ ಆಸೆ, ಆಕಾಂಕ್ಷೆ, ಹಠ, ಕೋಪತಾಪ, ಆಕ್ರೋಶ, ಸಿಟ್ಟು, ದ್ವೇಷ, ಪ್ರತೀಕಾರ, ಸೇಡು ಮುಂತಾದುವನ್ನು ಎಳೆಯೆಳೆಯಾಗಿ ಬಿಚ್ಚಿಟ್ಟಿದೆ. ಈ ಮಹಿಳಾ ಪಾತ್ರಗಳಿಂದಲೆ ಯಯಾತಿ ಕಾದಂಬರಿಯು ತನ್ನ ಬೆಳವಣಿಗೆಯಲ್ಲಿ ಹಲವು ತಿರುವುಗಳನ್ನು ಪಡೆಯುತ್ತಾ, ಓದುಗರ ಆಸಕ್ತಿ ಹಾಗೂ ಕುತೂಹಲಗಳನ್ನು ಕೆರಳಿಸುತ್ತಾ ಸಾಗುತ್ತದೆ. ಯಯಾತಿಯ ತಾಯಿ, ಯಯಾತಿಯ ಪಟ್ಟದ ನಂತರ ವನವಾಸಕ್ಕೆ ಹೋಗುತ್ತಾಳೆ. ನಂತರ ಕಾದಂಬರಿಯಲ್ಲಿ ದೇವಯಾನಿಯ ಪ್ರವೇಶವಾಗುತ್ತದೆ. ದೇವಯಾನಿ ಮತ್ತು ಶರ್ಮಿಷ್ಠೆಯರು ಶುಕ್ರಾಚಾರ್ಯರ ಮಕ್ಕಳಾಗಿದ್ದರೂ ಕೂಡ ಒಂದು ಸಣ್ಣ ಪ್ರಸಂಗವು ಇವರಿಬ್ಬರಲ್ಲಿ ವೈಮನಸ್ಸನ್ನು ಸೃಷ್ಟಿಮಾಡುತ್ತದೆ. ಇದು ಬೆಳೆದು ಶರ್ಮಿಷ್ಠೆ ದೇವಯಾನಿಗೆ ದಾಸಿಯಾಗುವ ಸನ್ನಿವೇಶ ನಿರ್ಮಾಣವಾಗುತ್ತದೆ. ಈ ಸಂದರ್ಭದಲ್ಲಿ

ದೇವಯಾನಿಯು ಶರ್ಮಿಷ್ಠೆಯನ್ನು ಅತ್ಯಂತ ಕೇವಲವಾಗಿ ನಡೆಸಿಕೊಳ್ಳುವ ಪ್ರಸಂಗಗಳನ್ನು ಕಾದಂಬರಿತ್ಯಂತ ಶಕ್ತಿಶಾಲಿಯಾಗಿ ನಿರೂಪಿಸಿದೆ. ಶರ್ಮಿಷ್ಠೆಯ ಪಾತ್ರಕ್ಕೆ ಬೇರೊಂದು ತಿರುವು ಕೊಡುವುದರ ಭಾಗವಾಗಿ ಈಕೆಯನ್ನು ನೆಲಮಾಳಿಗೆಯಲ್ಲಿ ಶಿಕ್ಷಿಸುವ ಸಂದರ್ಭವನ್ನು ಸೃಷ್ಟಿಸಲಾಗಿದೆ. ಇದು ಒಂದು ಆಯಾಮದಲ್ಲಿ ಮಹಾರಾಣಿಯ ಕ್ರೂರತನವನ್ನೂ ತೋರಿಸುತ್ತದೆ. ಮತ್ತೊಂದು ಆಯಾಮದಲ್ಲಿ ಶರ್ಮಿಷ್ಠೆ ಮತ್ತು ಯಯಾತಿಯರ ಪ್ರಾಮಾಣಿಕವಾದ ಅಪ್ಪಟ ಪ್ರೇಮವನ್ನೂ ಒಟ್ಟೊಟ್ಟಿಗೇ ಬಿಚ್ಚಿಡುತ್ತಿದೆ.

ಮುಂದೆ ಯಯಾತಿಯ ನೆರವಿನಿಂದ ಅರಮನೆಯಿಂದ ಹೊರಹೊರಟ ಶರ್ಮಿಷ್ಠೆ ಅನುಭವಿಸುವ ಸಂಕಟಗಳನ್ನು ಕಾದಂಬರಿ ಎಳೆಯೆಳೆಯಾಗಿ ಬಿಚ್ಚಿಟ್ಟಿದೆ. ಮಹಿಳಾ ಪಾತ್ರವೊಂದರ ಮೂಲಕ ಅತ್ಯಂತ ಕರುಣಾಜನಕವಾದ ಸನ್ನಿವೇಶವು ಇಲ್ಲಿ ಸೃಷ್ಟಿಯಾಗಿದೆ. ಶರ್ಮಿಷ್ಠೆಯ ಮಗ ಪುರುವಿನ ಸಾಧನೆಯಿಂದ ಈ ಪಾತ್ರವು ಕೊನೆಯಾಗುತ್ತದೆ.

## ಕೊನೆ ಟಿಪ್ಪಣಿಗಳು

೧. ಮಹಿಳಾ ಸಾಮಾಜಿಕತೆ, ಪುಟ ೧೪

೨. ಯಯಾತಿ, ಪುಟ ೧೧

೩. ಅದೇ, ಪುಟ ೧೦೭

೪. ಅದೇ, ೧೫೦

೫. ಅದೇ, ಪುಟ ೧೦೮

೬. ಅದೇ, ಪುಟ ೧೨೨

೭. ಅದೇ, ೧೭೧

೮. ಅದೇ, ಪುಟ ೧೭೨

೯. ಅದೇ, ಪುಟ ೩೭೯

೧೦. ಅದೇ, ೩೭೯

೧೧. ಅದೇ, ಪುಟ ೧೫೧

೧೨. ಅದೇ, ಪುಟ ೧೫೫

೧೩. ಅದೇ, ೨೭

೧೪. ಅದೇ, ಪುಟ ೩೦೬

೧೫. ಅದೇ, ೩೧೨

೧೬. ಅದೇ, ಪುಟ ೩೨೬

# ಅಧ್ಯಾಯ ನಾಲ್ಕು

## ಮಾನವ ಸ್ವಭಾವಗಳ ಶೋಧ

ಯಯಾತಿ ಕಾದಂಬರಿಯು ತನ್ನ ನಿರೂಪಣೆಯಲ್ಲಿ ಹಲವು ಬಗೆಯ ಮಾನವ ಸಂಬಂಧಗಳನ್ನು ಶೋಧಿಸಿದೆ ಹಾಗೂ ನಿರೂಪಿಸಿದೆ. ಇದು ಪಾತ್ರಗಳ ಸಂಭಾಷಣೆಯ ರೂಪದಲ್ಲಿ ನಿರೂಪಣೆಯ ಕ್ರಮದಲ್ಲಿ ಹಾಗೂ ಇಲ್ಲಿನ ಮುಖ್ಯ ಪಾತ್ರಗಳ ಸ್ವಗತ ವಿನ್ಯಾಸದಲ್ಲಿ ಮೂಡಿಬಂದಿದೆ. ಈ ಬಗೆಯ ಮಾನವ ಸ್ವಭಾವಗಳ ಶೋಧ ಮಾತ್ರವಾಗಿರದೆ, ಅದು ಪರೋಕ್ಷವಾಗಿ ಇಂದಿನ ಬದುಕಿನ ವಾಸ್ತವತೆಯನ್ನು, ಮನುಷ್ಯ ಅಪೇಕ್ಷೆ ಹಂಬಲ, ಅಸಹನೆ, ಹತಾಷೆ ಹಾಗೂ ಪ್ರತಿರೋಧಗಳೆಲ್ಲವನ್ನು ಒಳಗೊಂಡಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ.

ಈ ಕಾದಂಬರಿಯ ಆರಂಭದಲ್ಲೆ 'ಯಯಾತಿ'ಯ ಜೀವನದ ಕಥೆ ಆರಂಭವಾಗಿರುವುದನ್ನು ಕಾಣುತ್ತೇವೆ. ಇಲ್ಲಿನ ಸಂಭಾಷಣೆಯನ್ನು ಗಮನಿಸಿದರೆ ಮನುಷ್ಯ ತನ್ನ ಜೀವನದಲ್ಲಿ ಎಷ್ಟೇ ಸುಖ ಮತ್ತು ಲೋಲುಪತೆಯ ಕ್ಷಣಗಳಲ್ಲಿ ಇದ್ದರೂ, ಅವರು ಒಬ್ಬ ಸಾಮಾನ್ಯ ಮನುಷ್ಯರಾಗಿರುತ್ತಾರೆ ಎಂಬುದನ್ನು ಇದು ಮನವರಿಕೆಮಾಡಿಸುತ್ತದೆ. ಇದನ್ನು ಯಯಾತಿಯ ಮಾತಿನಲ್ಲೇ ಹೇಳುವುದಾದರೆ "ನಾನು ನನ್ನ ಕಥೆಯನ್ನು ಯಾತಕ್ಕೆಂದು ಹೇಳುತ್ತಿದ್ದೇನೆ ನನಗೆಯೆ ಅದು ಸರಿಯಾಗಿ ಗೊತ್ತಿಲ್ಲ. ನಾನೊಬ್ಬ ಅರಸನೇ? ಅಲ್ಲ, ಇದ್ದೆ"[1]. ಮನುಷ್ಯನ ನೆನಪುಗಳು ಎಂದಿಗೂ ಮಾಸಲು ಸಾಧ್ಯವಿಲ್ಲ. ಅದು ಜೀವನದಲ್ಲಿ ನೆನಪು ಮರುಕಳಿಸುತ್ತಲೇ ಇರುತ್ತವೆ. ಜೊತೆಗೆ ನಡೆದುದ್ದರಲ್ಲಿ ಮುಂದಿನ ಜೀವನಕ್ಕೆ ಕೆಲವೊಂದು ಅಂಶಗಳು ಅರಿವು ಮೂಡಿಸುತ್ತವೆ ಎಂಬುದು ವ್ಯಕ್ತವಾಗಿದೆ.

ಯಯಾತಿ ಕಾದಂಬರಿಯ ನಾಲ್ಕು ಭಾಗಗಳು ಮುಖ್ಯವಾಗಿ ಯಯಾತಿ ಜೀವನದ ನಾಲ್ಕು ಮಜಲುಗಳನ್ನು ಪರಿಚಯಿಸುತ್ತವೆ. ಬಾಲ್ಯ, ಯೌವನ, ವಿಲಾಸ ಹಾಗೂ ವೈರಾಗ್ಯ. ಈ ಯಾವುದೇ ಸಂದರ್ಭದಲ್ಲಿಯೂ ನಾವು ನೋಡುವುದು ಚಿಂತನಶೀಲ ಯಯಾತಿಯನ್ನೇ.

ಉದಾಹರಣೆಗೆ ಕಾದಂಬರಿಯ ಆರಂಭದಲ್ಲಿಯೇ ನೆನಪುಗಳು ಅರೆಮಧ ಬೆಳೆಯುವ ಯಯಾತಿಗೆ "ಅರಸರನೊಬ್ಬನ ಹೊಟ್ಟೆಯಲ್ಲಿ ಹುಟ್ಟಿದೆ ಎಂಬುದರಿಂದ ಅರಸನಾಗಿದೆ?'[೨] ಎಂಬ ಸತ್ಯದ ಅರಿವಿದೆ ಹಾಗೆಯೇ ಅದರಲ್ಲಿ ಅದರ ಹಿಂದಿನ ಒತ್ತಡವೂ ಇದೆ. 'ಬದುಕಿನ ಮೊದಲಲ್ಲಿ ಅರ್ಥವಿಲ್ಲವೆಂದು ಕಾಣುವುದರಲ್ಲಿಯೆ ಗಾಢವಾದ ಅರ್ಥ ತುಂಬಿಕೊಂಡಿರುತ್ತದೆ ಎನ್ನುವುದು ಬದುಕಿನ ಕೊನೆಯಲ್ಲಿ ತಿಳಿಯುತ್ತದೆ'[೩]. ಇಲ್ಲಿ ಯಯಾತಿ ಸ್ವವಿಮರ್ಶೆ ಮಾಡಿಕೊಂಡಿದ್ದರೂ ಕೂಡ ಬದುಕಿನಲ್ಲಿ ದೌರ್ಬಲ್ಯಕ್ಕೆ ಗುರಿಯಾಗುತ್ತಾ ಬಂದಿದ್ದಾನೆ. ಹೀಗೆ ಕಾದಂಬರಿಯಲ್ಲಿ ಹಂತ ಹಂತವಾಗಿ ಯಯಾತಿಯ ಬೆಳವಣಿಗೆಯನ್ನು ಅವನ ಮೇಲೆ ಇದ್ದ ಪರಿಸರ ಪ್ರಭಾವವನ್ನು ಲೇಖಕರು ಬಹಳ ವಿಸ್ತಾರವಾಗಿ ಚಿತ್ರಿಸಿದ್ದಾರೆ.

ಯಯಾತಿ ಚಿಕ್ಕವನಿದ್ದಾಗಿನಿಂದಲೂ ತನ್ನ ಇಚ್ಛೆಯಂತೆ ಬೆಳೆಯುವುದೇ ಇಲ್ಲ. "ನಮ್ಮ ಯಯು ವೀರನಾಗಬೇಕು, ಒಂದಲ್ಲ ಎರಡಲ್ಲ, ನೂರು ಅಶ್ವಮೇಧ ಯಜ್ಞಗಳನ್ನು ಅವನು ಮಾಡಬೇಕು"[೪]. ತನ್ನ ತಂದೆಯ ಇಚ್ಛೆಯಂತೆಯೇ ರಾಜನಾಗುತ್ತಾನೆ. ಅವನಲ್ಲಿ ಕವಿಯ ಮನಸ್ಥಿತಿ ಇದ್ದರೂ ಕೂಡ ಅದನ್ನು ಹತ್ತಿಕ್ಕುವ ಯತ್ನ ಇದಾಗಿದೆ. ಯಯಾತಿಯು ಮೊದಲಿಂದ ಕಡೆಯವರೆಗೂ ತನ್ನ ತಾಯಿಗೆ ಕೊಟ್ಟ ಏಕೈಕ ಮಾತಿನಿಂದಾಗಿ ಎಲ್ಲಿಯೂ ಪ್ರತಿಭಟಿಸಿ, ವಿರೋಧಿಸಿ ನಡೆಯುವುದಿಲ್ಲ. 'ಎಂದಿಗೂ ನಾನು ಸನ್ಯಾಸಿಯಾಗುವುದಿಲ್ಲ' ಎಂಬ ಅವನ ಮಾತಿನಿಂದಾಗಿ ಅವನು ಕೊನೆಯವರೆಗೂ ಪ್ರೀತಿಯಿಂದ ವಂಚಿತನಾಗಿ ಯಾತನೆಗೆ ಈಡಾಗುತ್ತಾನೆ.

ತನ್ನ ಪ್ರೀತಿಯ ಅಲಕೆಯನ್ನು ತನ್ನ ತಾಯಿಯೇ ಕೊಂದಾಗಲೂ ಸಹಿತ ಪ್ರತಿಭಟಿಸದೆ ತಾಯಿಯನ್ನು ನೋಯಿಸಬಾರದು ಎಂಬ ಏಕೈಕ ವಾಂಛಲ್ಯದಿಂದ ತನನ ಒಳ ಇಚ್ಛೆಗೆ ವಿರುದ್ಧವಾಗಿ ತಲೆಬಾಗುತ್ತಾನೆ. ಆ ಪ್ರತೀಕಾರವನ್ನು ದೇವಯಾನಿಯನ್ನು ಮದುವೆಯಾಗಿ ತಾಯಿ ಮೇಲಿನ ತನ್ನ ಸೇಡನ್ನು ತೀರಿಸಿಕೊಳ್ಳುತ್ತಾನೆ.

ತನ್ನಲ್ಲಿದ್ದ ಕವಿ ಮತ್ತು ನಿಸರ್ಗದೊಡನೆ ಇದ್ದ ಸಂಬಂಧವನ್ನು ಯಯಾತಿ ಇಲ್ಲಿ ಹೀಗೆ ಹೇಳಿದ್ದಾನೆ. 'ನಿಸರ್ಗದೊಡನೆ ನಿಕಟ ಭಾಂಧವ್ಯ ಆ ಕ್ಷಣಕ್ಕೆ ಕದಡಿ ಹೋಯಿತು. ಹೃದಯದ ಯಾವುದೋ ಒಂದು ಮೂಲೆಯಲ್ಲಿಯೇ ಇರಲಿ, ಒಂದು ಕಾಲಕ್ಕೆ ಕೆಲಮಟ್ಟಿಗಾದರೂ ನಾನೊಬ್ಬ ಕವಿಯಾಗಿದ್ದೆ. ಆ ಕ್ಷಣಕ್ಕೆ ಕವಿ ಸತ್ತು ಹೋದ! ನಾನು ವೀರನಾಗಿದ್ದೆ, ನಿಜ. ಆದರೆ ಆ ವೀರ ನನ್ನಲ್ಲಿಯ ಕವಿಯನ್ನು ಕೊಲೆಮಾಡಿ ಆತನ ಸಮಾಧಿಯ ಮೇಲೆ ತನ್ನ ಸಿಂಹಾಸನವನ್ನು ನಿಲ್ಲಿಸಿದ್ದ'[೫]. ತಾನು ಕ್ಷತ್ರಿಯ ರಾಜ ಬೇಟೆಯಾಡುವುದು ತನ್ನ ಧರ್ಮ ಎಂದು ಮನಸ್ಸನ್ನು

ಗಟ್ಟಿ ಮಾಡಿಕೊಂಡಿದ್ದ ಯಯಾತಿಯ ಒಳಗೂ ಒಬ್ಬ ಕವಿ ಇದ್ದ ಎಂಬುದನ್ನು ಮರೆಯುವಂತಿಲ್ಲ. ಒಬ್ಬ ವ್ಯಕ್ತಿಯಲ್ಲಿ ವಿವಿಧ ಬಗೆಯ ವ್ಯಕ್ತಿತ್ವ ಇರುತ್ತದೆ ಎಂಬುದನ್ನೂ ಮತ್ತು ಒಂದು ಬೇಕಾದಾಗ ಇನ್ನೊಂದನ್ನು ಕಳೆದುಕೊಳ್ಳಬೇಕಾಗುತ್ತದೆ ಎಂಬ ಪ್ರಕೃತಿ ಸಹಜವಾದ ನಿಯಮವು ಇಲ್ಲಿ ಅನಾವರಣಗೊಳ್ಳುತ್ತಿದೆ.

ಯಯಾತಿ ಋಷ್ಯಾಶ್ರಮಕ್ಕೆ ಎರಡು ವರುಷಗಳ ಕಾಲ ವಿದ್ಯೆ ಕಲಿಯಲು ಆಂಗಿರಸರ ಆಶ್ರಮಕ್ಕೆ ತೆರಳುತ್ತಾನೆ, ಅಲ್ಲಿ ಕಚನ ಪರಿಚಯವಾಗುತ್ತದೆ. ತಮ್ಮ ಸ್ನೇಹವನ್ನು ಯಯಾತಿ ಕೊನೆಯಲ್ಲಿ ಹೀಗೆ ಹೇಳುತ್ತಾನೆ. 'ಕಚ ಬಹುರೂಪಿಯಗಿದ್ದ, ಆತನ ಒಂದೊಂದು ರೂಪವನ್ನು ಕಂಡಾಗ ನನ್ನ ಮನಸ್ಸು ಗೊಂದಲಕ್ಕೀಡಾಗುತ್ತಿತ್ತು'[೫] ಎಂಬ ಯಯಾತಿಯ ಮಾತುಗಳ ಆಳವು ಕಚನ ಉನ್ನತ ವ್ಯಕ್ತಿತ್ವಕ್ಕೆ ಸಾಕ್ಷಿಯಗಿವೆ.

ಕಚನು ಋಷಿ ಕುಮಾರನಾಗಿದ್ದ, ಅಲ್ಲದೆ ಅವನು ಕವಿಯೂ ಆಗಿದ್ದ. ಯಯಾತಿ ತನ್ನಲ್ಲಿಯ ಅನೇಕ ಪ್ರಶ್ನೆಗಳನ್ನು ಕಚನೊಂದಿಗೆ ಕೇಳಿ ಅವನಿಂದ ಉತ್ತರ ಪಡೆಯುತ್ತಾನೆ. 'ಉಪಭೋಗ ಪಾಪವೇ? ಈ ಲೋಕದಲ್ಲಿ ಸುಖದ ಮಾರ್ಗವೇ? ನಾಳೆ ಅರಸನಾಗುವುದನ್ನು ಬಿಟ್ಟು ನಾನು ಸನ್ಯಾಸಿಯಾಗುವುದು ಯೋಗ್ಯವಾದೀತೆ? ಸಿಂಹಾಸನವನ್ನೇರಿ ಸನ್ಯಾಸಿಯಂತೆ ನಡೆದುಕೊಳ್ಳುವುದು ಸಾಧ್ಯವೇ?[೬] ಈ ಎಲ್ಲಾ ಪ್ರಶ್ನೆಗಳ ಮೂಲಕವೇ ಯಯಾತಿಯ ಎದೆಯೊಳಗಿನ ತುಮುಲ, ಸುಖದ ಶೋಧದ ತೀವ್ರತೆ, ಜೀವನದ ಹುಡುಕಾಟದ ಪ್ರಾಮಾಣಿಕತೆ ಗೋಚರಿಸುತ್ತದೆ. ಈ ಎಲ್ಲಾ ಪ್ರಶ್ನೆಗಳಿಗೆ ಕಚ ಸಮರ್ಥವಾಗಿ ಉತ್ತರಿಸುವ ಮೂಲಕ ಯಯಾತಿಗೆ ಮನದಟ್ಟು ಮಾಡುತ್ತಾನೆ. 'ಯುವರಾಜ ಸಂಸಾರದಲ್ಲಿ ತೊಡಗಿರುವುದೇ ಮನುಷ್ಯನ ಸಹಜ ಪ್ರವೃತ್ತಿ. ಸ್ವಾಭಾವಿಕವಾಗಿಯೇ ಆತನ ಬದುಕಿನಲ್ಲಿ ಎಲ್ಲ ಬಗೆಯ ಉಪಭೋಗಗಳಿಗೆ ಸ್ಥಾನವಿದೆ. ಉಪಭೋಗವಿರಬಾರದು ಎಂದು ಈಶ್ವರನ ಅಪೇಕ್ಷೆಯಾಗಿದ್ದರೆ ಆತ ಮನುಷ್ಯನಿಗೆ ದೇಹವನ್ನು ದಯಪಾಲಿಸುತ್ತಿರಲಿಲ್ಲ. ಆದರೆ ಉಪಭೋಗವೊಂದೇ ಜೀವನವಲ್ಲ. ದೇಹವನ್ನು ದಯಪಾಲಿಸಿದಂತೆ ದೇವರು ಮನುಷ್ಯನಿಗೆ ಆತ್ಮವನ್ನೂ ದಯಪಾಲಿಸಿದ್ದಾನೆ. ದೇಹದ ಪ್ರತಿಯೊಂದು ಬಯಕೆಗೂ ಆತ್ಮದ ಬಂಧನವಿರಬೇಕಾಗುತ್ತದೆ. ಹಾಗೆಂದು ಮನುಷ್ಯನ ಆತ್ಮ ಸದಾಕಾಲವೂ ಜಾಗೃತವಾಗಿ ಇರಬೇಕಾಗುತ್ತದೆ. ಮಧ್ಯದ ಅಮಲೇರಿದ ಸಾರಥಿ ಕೈಯಿಂದ ಕಡಿವಾಣ ಕಳಚಿ ಬೀಳುತ್ತದೆ; ಕುದುರೆಗಳು ಸ್ವೈರವಾಗಿ ನೆಗೆಯುತ್ತವೆ; ರಥ ಕಂದರಕ್ಕೆ ಬಿದ್ದು ನುಚ್ಚು ನೂರಾಗುತ್ತದೆ. ಅದನ್ನೇರಿದ ಧನುರ್ಧಾರಿಯಾದ ವೀರ ವ್ಯರ್ಥವಾಗಿ ಪ್ರಾಣಕ್ಕೆ ಎರವಾಗುತ್ತಾನೆ'[೭]. ಇಷ್ಟೆಲ್ಲವನ್ನು

ತಿಳಿದುಕೊಂಡರೂ ಸಹ ಯಯಾತಿಗೆ ಅದು ಆ ಸಂದರ್ಭದಕ್ಕೆ ಗಿಳಿಪಾಠವಾಗಿಯೆ ಕಾಣುತ್ತದೆ. ಆ ಎಲ್ಲಾ ಮಾತುಗಳಲ್ಲಿ ಯಾವುದನ್ನೂ ಆತ ತನ್ನ ಮನಸ್ಸಿಗೆ ಹಾಕಿಕೊಳ್ಳುವುದೇ ಇಲ್ಲ. ಅದು ಕೊನೆಯಲ್ಲಿ ಮಂದಾರನ ಮದಿರೆ ಮದಿರಾಕ್ಷಿಯ ಅಮಲಿನಿಂದ ಆದ ಅನಾಹುತಗಳಿಂದ ಕಚನ ಮಾತುಗಳು ಸತ್ಯವೆಂಬುದು ಮನವರಿಕೆಯಾಗುತ್ತದೆ. ಮನುಷ್ಯ ತನಗೆ ಅಗತ್ಯವಾಗಿ ಬೇಕಾದದ್ದನ್ನು ಬೇಗ ಗ್ರಹಿಸಿಕೊಳ್ಳದೇ ಅನಾಹುತಕ್ಕೀಡಾಗುತ್ತಾನೆ ಎಂಬುದು ಇಲ್ಲಿ ಅತ್ಯಂತ ಶಕ್ತಿಶಾಲಿಯಾಗಿ ಅನಾವರಣಗೊಂಡಿದೆ.

ಇದೆಲ್ಲವನ್ನು ತಿಳಿದುಕೊಂಡರೂ ನನ್ನ ಮನಸ್ಸಿನಾಳಕ್ಕೆ ಇಳಿಯುವುದಿಲ್ಲ. ತನ್ನ ತಂದೆಯು ಅನಾರೋಗ್ಯದಿಂದ ಬಳಲುತ್ತಿದ್ದುದನ್ನು ತಿಳಿದ ಯಯಾತಿ ಅಲ್ಲಿಂದ ಅರಮನೆಗೆ ಮರಳಬೇಕಾದ ಸಂದರ್ಭ ಬಂದೊದಗುತ್ತದೆ. ಇದರಿಂದಾಗಿ ಕಚನನ್ನು ಬೀಳ್ಕೊಟ್ಟು ಬರುತ್ತಾನೆ. ತನ್ನ ತಂದೆ ಮೃತ್ಯುಶಯ್ಯೆಯಲ್ಲಿಯೂ ಸಹ ಹೇಳಿದ ಕೆಲವು ಮಾತುಗಳು ಯಯಾತಿಯ ಜೀವನದಲ್ಲಿ ಆನುವಂಶಿಕವಾಗಿ ಬಂದಿದೆ ಎಂಬಂತೆ ಮುಂದುವರೆಸುವುದು ಗೋಚರಿಸುತ್ತದೆ. "ಈ ಎಲ್ಲಾ ಸೌಂದರ್ಯವನ್ನು ಈ ಎಲ್ಲ ವೈಭವವನ್ನು ಇಲ್ಲಿಯೆ ಬಿಟ್ಟು ಹೋಗಬೇಕೆ ನಾನು! ಎಂದು ಕ್ಷೀಣ ಸ್ವರದಲ್ಲಿ ಹೇಳುತ್ತಾ, ಈ ಅಮೃತತ್ವವನ್ನು ಸವಿಯಬೇಕೆಂಬ ಆಸೆ ಇನ್ನೂ ತಣಿಯಲಿಲ್ಲ. ಆದರೆ..."[೬]. ಇದನ್ನು ಗಮನಿಸಿದರೆ ಯಯಾತಿ ತನ್ನ ತಂದೆಯ ಹಾದಿಯಲ್ಲೇ ಮುಂದುವರೆಯುತ್ತಾನೆ. ತನ್ನ ಪೂರ್ವಜರ ಪರಂಪರೆಯನ್ನು ಈ ರೀತಿಯಾಗಿ ಮುಂದುವರೆಸುತ್ತಾನೆ. ತನ್ನ ಮುಪ್ಪಿನ ಕಾಲದವರೆಗೂ ಕಾಮತೃಷೆಯನ್ನು ನೀಗಿಸಿಕೊಳ್ಳಲು ವಿಫಲನಾಗುತ್ತಾನೆ. ಬಂಗಾರದ ಕೂದಲನ್ನು ಹೊಂದಿದ ಅಲಕೆಯನ್ನೂ ಆಲಂಗಿಸದೆ ತನ್ನ ತಪ್ಪು ಮನವರಿಕೆಯಾಗದೇ ಇದ್ದಾಗ ತನ್ನ ಮುಪ್ಪು ತನ್ನನ್ನು (ಯಯಾತಿ) ಆವರಿಸಿಕೊಂಡಾಗ ಅಲ್ಲಿಯೂ ಕೂಡ ಯಯಾತಿ ಇದೇ ಮಾತನ್ನು ಹೇಳುತ್ತಾನೆ.

ಯಯಾತಿ ತನ್ನ ತಂದೆಯ ಮರಣದಿಂದಾಗಿ ಮನಸ್ಸು ವ್ಯಾಕುಲ ಸ್ಥಿತಿಗೆ ತಲುಪಿದಾಗ 'ಮಾಧವ' ಯಯಾತಿಯ ಆಪ್ತ ಸ್ನೇಹಿತನಾಗುತ್ತಾನೆ. ಮಾಧವ ತನ್ನ ಸ್ನೇಹಕ್ಕಾಗಿ ತನ್ನ ಪ್ರಾಣವನ್ನು ಒತ್ತೆ ಇಟ್ಟು ಶರ್ಮಿಷ್ಠೆ ಹಾಗೂ ಪುರುವನ್ನು ರಕ್ಷಿಸುವಲ್ಲಿ ಇವನ ಪಾತ್ರ ಬಹಳ ಮುಖ್ಯವಾದುದು. ಮಾಧವನ ಅಣ್ಣನ ಮಗಳು ಪುಟ್ಟ ಬಾಲಕಿ 'ತಾರಕೆ' ಯಯಾತಿಯನ್ನು ನನ್ನ ಬೊಂಬೆಗೆ ಗಂಡನಾಗುತ್ತೀಯಾ[೭] ಎಂದು ಮುಗ್ಧ ಮನಸ್ಸಿನ ಆ ಮುದ್ದು ಬಾಲಕಿ ಪ್ರಶ್ನಿಸುತ್ತಾಳೆ. ಆದರೆ ಇದೇ ಮುದ್ದು ತಾರಕೆ ಯಯಾತಿಯ ಕಾಮಾಂಧಕ್ಕೆ ಸಿಕ್ಕಿ ಹೂ ಬೆಂಕಿಯಲ್ಲಿ ಸಿಲುಕಿ ಆತ್ಮಹತ್ಯೆಗೆ ತುತ್ತಾಗುತ್ತಾಳೆ.

ಯಯಾತಿ ಬೇಟೆಯಾಡಲು ಹೋದಾಗ ಆಕಸ್ಮಾತಾಗಿ ದೇವಯಾನಿಯ ಭೇಟಿಯಾಗುತ್ತದೆ. ದೇವಯಾನಿ 'ಪಾಣಿಗ್ರಹಣ ಮಾಡಿದೀರಿ'
zÉêÀAiÀiÁ¤ "¥ÁtÂUÀæºÀ ªÀiÁr¢Ãj[೧೦] ಎಂದು ಯಯಾತಿಯನ್ನು ವಿವಾಹವಾಗುತ್ತಾಳೆ. ತಾಯಿಯ ನೆರಳಿಲ್ಲದೆ, ತಂದೆಯ ಆಶ್ರಯದಲ್ಲೇ ಬೆಳೆದ ದೇವಯಾನಿ, ಅತೀ ರೂಪವತಿ, ನೃತ್ಯಗಾರ್ತಿಯು ಆಗಿದ್ದಳೋ ಅಷ್ಟೇ ಹಠಮಾರಿ ಸ್ವಾರ್ಥಿ, ಅಹಂಕಾರಿ ಕೂಡ ಹೌದು. ಇವಳ ತಂದೆ ಶುಕ್ರಾಚಾರ್ಯರಾದರೋ ಕೋಪಿಷ್ಠ ಸ್ವಭಾವದವನು. ಇವೆಲ್ಲವೂ ದೇವಯಾನಿಗೆ ಸ್ವತ್ತಾಗುತ್ತದೆ. ಕಚನ ಪ್ರೀತಿಯಿಂದ ತಿರಸ್ಕೃತಳಾದ ದೇವಯಾನಿಗೆ ಇನ್ನಷ್ಟು ಈರ್ಷೆ ಬೆಳೆಯುತ್ತದೆ. ಇವಳ ಸೇಡಿನ ಜ್ವಾಲೆಗೆ ಶರ್ಮಿಷ್ಠೆ ಯಯಾತಿ, ಪುರು ಎಲ್ಲರೂ ಸಿಲುಕಿ ಯಾತನೆಯನ್ನು ಅನುಭವಿಸುತ್ತಾರೆ. ಅಷ್ಟೇ ಅಲ್ಲದೇ ದೇವಯಾನಿಯಲ್ಲಿ ಬದಲಾಗದ ಏಕೈಕ ವ್ಯಕ್ತಿ ಎಂದರೆ ಶುಕ್ರಾಚಾರ್ಯ ಮಾತ್ರ, ತನ್ನ ತಂದೆಯೇ ಶ್ರೇಷ್ಠ, ತನ್ನ ಜಾತಿಯೇ ಶ್ರೇಷ್ಠ ಎಂದು ಅಹಂಕಾರದ ಮದದಲ್ಲಿ ಮೆರೆಯುವ ದೇವಯಾನಿಗೆ ಕಡೆಯವರೆಗೂ ಅವಳು ಸೇಡಿನ ಜ್ವಾಲೆಯಲ್ಲೇ ಬೆಂದು ಹೋಗುತ್ತಾಳೆ.

ದೇವಯಾನಿ ಪಾಣಿಗ್ರಹಣ ಮಾಡಿದ ಯಯಾತಿಯನ್ನು ಮದುವೆಯಾಗುವುದು ಪ್ರೀತಿಯಿಂದಲ್ಲ. ಬದಲಾಗಿ ಮಹಾರಾಣಿಯಾಗಿ ಕಚನ ಮೇಲೆ ಹಾಗೂ ರಾಜಕನ್ಯೆ ಶರ್ಮಿಷ್ಠೆಯ ಮೇಲೆ ಸೇಡು ತೀರಿಸಿಕೊಳ್ಳುವ ಉದ್ದೇಶವಾಗಿತ್ತು. ದೇವಯಾನಿ ಕಚನನ್ನು ಪ್ರೀತಿಸಿದ್ದಳು. ಆದರೆ ಕಚ ಲೋಕದ ಹಿತಕ್ಕಾಗಿ ತನ್ನ ಅಮೂಲ್ಯವಾದ ಪ್ರೀತಿಯನ್ನು ತಿರಸ್ಕರಿಸಿ ತ್ಯಾಗಿಯಾಗಿದ್ದಾನೆ. ಇವರಿಬ್ಬರ ಪ್ರೀತಿ ಎಂತಹದ್ದು ಎಂಬುದಕ್ಕೆ 'ಕಚನನ್ನು ಮದುವೆಯಾಗಿದ್ದರೆ ನಾನು ಸುಖಿಯಾಗಿರುತ್ತಿದ್ದೆ. ಆತನ ಪರ್ಣಕುಟೀರದಲ್ಲಿ ನನಗೆ ಸಿಕ್ಕಿರಬಹುದಾದ ಆನಂದ ಈ ಅರಮನೆಯಲ್ಲಿ ನನ್ನ ಪಾಲಿಗೆ ಒಂದು ದಿನವೂ ಬರಲಿಲ್ಲ. ಆದರೆ.....! ನಿಜವಾಗಿಯೂ ನಾನು ಸುಖವಾಗಿರಬಹುದಿತ್ತೆ? ಆತನನ್ನು ನಾನು ಪ್ರೀತಿಸಿದೆ. ಆದರೆ ಮನಸ್ಸಿನ ಈ ಕುರುಡು ಸೆಳೆತದಿಂದ ಮನುಷ್ಯ ಸುಖಿಯಾಗಬಲ್ಲನೆ? ನಿರಪೇಕ್ಷಿತವಾಗಿತ್ತೆ? ಒಂಟಿತನದ ಈ ದುಃಖ ಸದಾ ಕಾಲವೂ ನನ್ನ ಬೆನ್ನು ಬಿಡುವುದಿಲ್ಲವೆ? ಕೊನೆಯವರೆಗೂ ನಾನು ಹಸಿದವಳಾಗಿಯೇ ಉಳಿಯುವೆನೇ?'[೧೧] ದೇವಯಾನಿಯ ಈ ಮೇಲಿನ ಮಾತುಗಳು ಕಚ ಮತ್ತು ದೇವಯಾನಿಯರ ಅಮೂರ್ತವಾದ ಪ್ರೇಮಭಾವವನ್ನು ಸಾರುತ್ತವೆ. "ಒಲಿದ ಎರಡು ಹೃದಯಗಳ ಮಿಲನವಾಗದೆ ಮಧ್ಯದಲ್ಲಿ ವಿಧಿ ಎಬ್ಬಿಸಿದ ಬಿರುಗಾಳಿಯಿಂದಾಗಿ ಕಚ ಮತ್ತು ದೇವಯಾನಿಯರ ಜೀವ ಮಾತ್ರವೇ ಅಲ್ಲ, ಉಳಿದ ಪಾತ್ರಗಳೂ ಸುಂಟರಗಾಳಿಗೆ ಸಿಲುಕಿದ ತರಗೆಲೆಗಳಾಗುತ್ತವೆ"[೧೨]. ಕಚ ದೇವಯಾನಿಯನ್ನು ಪ್ರೀತಿಸಲಿಲ್ಲವೆಂದಲ್ಲ. ಆದರೆ ಆತನ ಮನಸ್ಸು ವಿಫಲತೆಯ ಸುಳಿಯಲ್ಲಿ ಸಿಲುಕುವುದಿಲ್ಲ. ಮಾತ್ರವಲ್ಲ, ತನ್ನ ಆತ್ಮಶಕ್ತಿಯಿಂದಾಗಿ ಕಾಮಟುವಾಸನೆಯನ್ನು ಗೆದ್ದು, ನಿರಪೇಕ್ಷ

ಪ್ರೀತಿಯೊಂದನ್ನು ಮಾತ್ರ ಉಳಿಸಿಕೊಳ್ಳುತ್ತಾನೆ'[೧೩]. ಕಚ ಮತ್ತು ದೇವಯಾನಿಯರ ಪ್ರೀತಿಯ ಬಗ್ಗೆ ತಿಳಿಯುವುದರ ಜೊತೆಗೆ ಮುಗ್ಧ ಶರ್ಮಿಷ್ಠೆಗೆ ಕಚನು ಅಣ್ಣ, ಗುರು ಸಹ ಆಗುತ್ತಾನೆ. ಕಚನ ಮಾತುಗಳು ಶರ್ಮಿಷ್ಠೆಗೆ ಜೀವನದ ಹಾದಿ ಸಾಗಿಸಿಕೊಳ್ಳಲು ಮತ್ತು ದೇವಯಾನಿಯ ದಾಸಿಯಗಲು ಮಾರ್ಗದರ್ಶನವಾಗುವುದರ ಜೊತೆಗೆ ಜೀವನದ ಪಾಠವಾಗುತ್ತವೆ.

ಶರ್ಮಿಷ್ಠೆ ದೇವಯಾನಿಯ ದಾಸಿಯಾಗಲು ಒಪ್ಪಿಕೊಳ್ಳುತ್ತಾಳೆ. ಸಿಟ್ಟಿನ ಭರದಲ್ಲಿ ಆಡಿದ ಮಾತಿನ ಸಲುವಾಗಿ ಶರ್ಮಿಷ್ಠೆ ಇಡೀ ಜೀವನಪೂರ್ತಿ ತ್ಯಾಗಿಯಾಗಿ ಕಣ್ಣೀರಲ್ಲೆ ಕೈ ತೊಳೆಯುವಂತೆ ದೇವಯಾನಿ ಮಾಡುತ್ತಾಳೆ. ಮೊದ ಮೊದಲು ದೇವಯಾನಿಯ ದಾಸಿಯಾಗಲು ಮನಸ್ಸು ಒಪ್ಪುವುದಿಲ್ಲವಾದರೂ ತನ್ನ ತಂದೆ ಮತ್ತು ರಾಕ್ಷಸರ ರಾಜ್ಯಕ್ಕಾಗಿ ಒಪ್ಪಿಕೊಳ್ಳುತ್ತಾಳೆ. ಆಗ ಕಚನ ನೆನಪು ಅವಳಿಗಾದಾಗ ಅವನಾಡಿದ ಒಂದೊಂದು ಮಾತುಗಳೂ ಸಹ ಶರ್ಮಿಷ್ಠೆಗೆ ಧೈರ್ಯವನ್ನು ಕೊಡುತ್ತವೆ. ಹಾಗೆಯೇ ಸಂಜೀವಿನ ವಿದ್ಯೆಗಾಗಿ ಆತ ತನ್ನ ಜೀವನವನ್ನೂ ಸಹ ಲೆಕ್ಕಿಸದೆ ತನ್ನ ಆತ್ಮಸ್ಥೈರ್ಯವನ್ನು ಕಳೆದುಕೊಳ್ಳದೆ ಮರಳಿ ಪ್ರತ್ನಿಸಿ ಯಶಸ್ವಿಯಾಗುತ್ತಾನೆ. 'ದೂರದಿಂದ ಭಯಂಕರವಾಗಿ ಕಂಡದ್ದು ನಿಜವಾಗಿಯೂ ಅಷ್ಟು ಭಯಂಕರವಾಗಿರುವುದಿಲ್ಲ. ಮರಣವಾದರೂ ಹಾಗೆಯೇ. ನಾನು ಹೇಳುತ್ತಿರುವುದು ಅನುಭವದ ಮಾತುಗಳನ್ನು, ರಾಜಕನ್ಯೆ'[೧೪]. ಕಚನ ಈ ಮಾತುಗಳು ಎಂತಹವರಿಗೂ ಆತ್ಮಸ್ಥೆರ್ಯವನ್ನು ನೀಡುತ್ತವೆ. ಈ ಮಾತುಗಳಿಂದಲೆ ಶಮಿಷ್ಠೆ ದಾಸಿಯಗಲು ಒಪ್ಪಿಕೊಳ್ಳಲು ಸಾಧ್ಯವಾಗುತ್ತದೆ ಮತ್ತು ಧೈರ್ಯವಾಗಿರಲು ಸಹಕಾರಿಯಾಗಿದೆ. ಇಲ್ಲಿ ಶರ್ಮಿಷ್ಠೆಯು ರಾಕ್ಷಸರ ರಾಜ್ಯದ ಉಳಿವಿಗಾಗಿ ಹೋರಾಡುವುದನ್ನು ಕಾಣುತ್ತೇವೆ.

ಯುವಕನಾದ ಯಯಾತಿ ಅಶ್ವಮೇಧ ಯಾಗವನ್ನು ಮುಗಿಸಿ ಹಸ್ತಿನಾಪುರಕ್ಕೆ ಹಿಂದಿರುಗುವಾಗ ಯಯಾತಿಯ ಮನಸ್ಸು ಅಲಕೆಯನ್ನೇ ಹರಸುತ್ತಾ ಬರುತ್ತಿತ್ತು. ಅಲಕೆಯ ಒಂದು ನೋಟಕ್ಕಾಗಿ ಚಡಪಡಿಸುತ್ತಿದ್ದ. ತನ್ನ ಆಗಮನಕ್ಕಾಗಿ ಅಲಕೆ ಕಾಯುತ್ತಿರುತ್ತಾಳೆ ಎಂಬ ಇಂತಹ ಹಲವಾರು ನೆನಹುಗಳನ್ನು ಮರುಕಳಿಸುತ್ತಲೇ ರಾತ್ರಿಯವರೆಗೂ ಚಡಪಡಿಕೆಯಲ್ಲಿಯೇ ತೊಡಗುತ್ತಾನೆ. ಆ ಕುರಿತು ತನ್ನ ತಾಯಿಯನ್ನು ಕುರಿತು ಕೇಳಿದ್ಾಗ ಆಕೆ ಕೇಳಿಯೂ ಕೇಳಿಸದಂತೆ ವರ್ತಿಸುತ್ತಾಳೆ. ಆಗ ಯಯಾತಿ ಸೆಡವಿನಲ್ಲಿಯೆ 'ಅಲಕೆ ಎಲ್ಲಿ' ಎಂದು ಕೇಳಿದಾಗ ಅವರ ಚಿಕ್ಕಮ್ಮನ ಮನೆಗೆ ಹೋಗಿದ್ದಾಳೆ. ಅವಳಿಗೆ ಮದುವೆಯಾಯಿತೆಂದಾಗ ಯಯಾತಿಗೆ ಒಂದರೆಕ್ಷಣ ಹೃದಯ ನಿಂತಂತೆನಿಸುತ್ತದೆ. ಮತ್ತೂ ಮುಂದುವರಿದು ಮತ್ತೆ ಹೇಳಲೇ ಇಲ್ಲ ನನಗೆ, ಎಂದಾಗ ತಾಯಿ "ಅದೇನು ದೊಡ್ಡ ವಿಷಯ ಎಂದು ತಿಳಿಸಬೇಕು? ದಾಸಿಯ ಮಗಳ ಮದುವೆ ಹಾಗೂ

ಒಂದು ಬೊಂಬೆಯ ಮದುವೆ, ಎರಡೂ ಒಂದೇ!'[೧೫] ಎನ್ನುತ್ತಾಳೆ. ಇಲ್ಲಿ ರಾಜಮಾತೆಯ ಮಾತಲ್ಲಿ ಕೊಂಕುನುಡಿಗಳು ಮತ್ತು ತನ್ನ ಅಧಿಕಾರದ ಮಾತುಗಳು ನೇರವಾಗಿ ಗೋಚರಿಸುತ್ತವೆ. ಹಾಗೆಯೇ ಸಮಾಜದಲ್ಲಿ ಕೆಳಸ್ತರದಲ್ಲಿದ್ದವರಿಗೆ ಇರುವಂತಹ ಸ್ಥಾನಮಾನ ಮತ್ತು ಅವರಿಗೆ ಸಿಗುತ್ತಿದ್ದ ಗೌರವ ಎಂತಹದ್ದು ಎಂಬುದು ಆ ಮಾತಿನಲ್ಲಿ ಸ್ಪಷ್ಟವಾಗುತ್ತದೆ.

ಹಿಮಾಲಯದ ಆಚೆಗೆ ಮದುವೆ ಮಾಡಿಕೊಟ್ಟಿದ್ದ ಅಲಕೆ ಮತ್ತೆ ಯುವರಾಜನ ಕೈಸೇರುತ್ತಾಳೆ. ತನ್ನ ಮೊದಲ ಪ್ರೇಯಸಿಯಾಗಿ ಅಲ್ಲ. ಒಬ್ಬ ತಂಗಿಯಾಗಿ ಇವೆಲ್ಲವನ್ನು ಸಹಿಸಲಾಗದೆ ಕುಟಿಲ, ಲಂಪಟ, ಮಂದಾರ ರಾಜಮಾತೆಯಲ್ಲಿ ಮೊದಲೇ ದೂರನ್ನು ಸಲ್ಲಿಸಿರುತ್ತಾನೆ. ಮುಗ್ಧ ಅಲಕೆಯ ಸಾವಿಗೆ ಕಾರಣನಾಗುತ್ತಾನೆ.



ಅಲಕಾ ನೀರಿಗೆ ಹಾರಿದಾಗ ಯಯಾತಿ ಅವಳನ್ನು ಮೇಲಕ್ಕೆತ್ತಿ ರಕ್ಷಿಸುತ್ತಾನೆ. ಆಕೆಯನ್ನು ಹಿಂದಿನ ಸಲಿಗೆಯ, ಪ್ರೀತಿಯ ಬಲದಿಂದ ಮುದ್ದಿಸಲು ಮುಂದಾದಾಗ ಆಕೆ ಮೈಮೇಲೆ ಮುಳ್ಳು ಬಂದಂತೆ "ಬೇಡ ನಾನೀಗ ಇನ್ನೊಬ್ಬರವಳು'[೧೬] ಎಂದು ಭೀತಿಯಿಂದ ತನ್ನ ಕಥೆಯನ್ನು ಹೇಳಿಕೊಳ್ಳುತ್ತಾಳೆ. ಅಲಕಾ ಒಬ್ಬ ದಾಸಿಯ ಮಗಳು ಹಾಗೂ ಯಯಾತಿಗೆ ಹಾಲುಣಿಸಿದ ಕಲಿಕಾಳ ಮಗಳು. ಇವರಿಬ್ಬರು ಒಂದೇ ಓರಗೆಯವರು. "ನಿನ್ನ ತಾಯಿಯ ಹಾಲು ಕುಡಿದು ನಾನು ಬೆಳೆದಿದ್ದೇನೆ· ನೀನು ನನ್ನ ತಂಗಿ!'[೧೭] ಎಂದು ಹೇಳುತ್ತಾನೆ. ಅಲಕೆಗೆ ಆ ಮಾತುಗಳು ನಂದಿಹೋಗುತ್ತಿದ್ದ ದೀಪಕ್ಕೆ ಎಣ್ಣೆಯಂತಾಗುತ್ತವೆ. ಸಂಬಂಧಗಳನ್ನು ಬದಲಾಯಿಸುವುದು ಕಷ್ಟ. ಅದು ಕೇವಲ ಶಬ್ದ ಬದಲಿಸಿದಷ್ಟು ಸುಲಭವಾದ್ದದ್ದಲ್ಲ. ಆದರೆ ಈ ಇಬ್ಬರ ಸಂಬಂಧವನ್ನು ಸಹಿಸಲಾರದ ರಾಜಮಾತೆ ಅಲಕೆಗೆ ವಿಷ ಉಣಿಸಿ ಆಕೆಯನ್ನು ಕೊಲೆಗೈಯುತ್ತಾಳೆ. ದೇವಯಾನಿ ಮತ್ತು ಯಯಾತಿ ಪರಸ್ಪರ ಪ್ರೀತಿಯಿಂದ ದಾಂಪತ್ಯವನ್ನು ಕಳೆಯದೆ ಸ್ಪರ್ಧೆ, ಸೇಡು ಪ್ರತಿಕಾರದಲ್ಲೆ ಕಳೆಯುತ್ತಾರೆ. ಇದರಿಂದ ನೊಂದ ಯಯಾತಿ ಪ್ರೀತಿಯನ್ನರಸುತ್ತಾ ಭೋಗ ಜೀವನಕ್ಕೆ ಕಾಲಿರಿಸುತ್ತಾನೆ. ನಹುಷ ಮಹಾರಾಜನಿಗಿದ್ದ ಶಾಪ ತನ್ನ ಮಕ್ಕಳಲ್ಲಿ ನಿಜವನ್ನು ತೋರಿಸಿದ್ದಾರೆ.. "ನಹುಷ ಮಹಾರಾಜನ ಮಕ್ಕಳು ಎಂದಿಗೂ ಸುಖವಾಗಿರಲಾರರು"[೧೮]. ಇಲ್ಲಿ ನಹುಷನಿಗೆ ಇದ್ದ ಶಾಪ ಇಬ್ಬರು ಮಕ್ಕಳ ಮನಸ್ಸನ್ನೂ ಪ್ರತಿಹಂತದಲ್ಲೂ ವಿಚಲಿತಗೊಳಿಸುತ್ತಿತ್ತು. ಒಬ್ಬ ವಿರಾಗಿಯ ದಾರಿಯಲ್ಲಿ; ಮತ್ತೊಬ್ಬ ಅನುರಕ್ತ ಪ್ರೇಮಿಯ ದಾರಿಯಲ್ಲಿ. ಮತ್ತೊಬ್ಬ ಸ್ತ್ರೀ ಭೋಗಾಭಿಲಾಷಿಯಾಗಿ! ಅವರೇ ಯತಿ ಮತ್ತು ಯಯಾತಿ. 'ಹಿರಿಯಕ್ಕನ ಚಾಳಿ ಮನೆ ಮಂದಿಗೆ' ಎನ್ನುವಂತೆ ನಹುಷ ಮಾಡಿದ ಪಾಪಕೃತ್ಯಕ್ಕೆ ಅವನ ಇಬ್ಬರೂ ಮಕ್ಕಳು ಅನುಭವಿಸುವುದು. ಯಯಾತಿ ದೇವಯಾನಿಯನ್ನು ಮದುವೆಯಾದ

ಮೇಲೆ ಈ ಶಾಪದ ಪರಿಣಾಮ ಯಯಾತಿಯ ಮೇಲೆ ಆಗುತ್ತದೆ.

“ಲೋಕಕ್ಕೆ ಅನಿಸುತ್ತಿತ್ತು ಯಯಾತಿ ಅರಸನಾದ, ವೈಭವಶಾಲಿಯದ, ಒಂದು ರಾಜ್ಯಕ್ಕೆ ದೊರೆಯಾದ ಎಂದು. ಆದರೆ ಯಯಾತಿ ನಿಜವಾಗಿಯೂ ತಬ್ಬಲಿಯಾಗಿದ್ದ, ನಿರಾಧಾರನಾಗಿದ್ದ”[೨೯] ಯಯಾತಿ ಅಂದುಕೊಳ್ಳುತ್ತಾನೆ. ಯಯಾತಿಯ ಈ ಸೂಕ್ಷ್ಮವಾದ ಸಂವೇದನೆಯ ಯಯಾತಿಯ ಜೀವನ ದೇವಯಾನಿಯ ಗಂಡನಾಗುವ ಮೂಲಕ ವಿರಹದ ಹಾದಿಯನ್ನು ಹಿಡಿಯುತ್ತದೆ. ನಿರ್ಮಲ, ನಿರಪೇಕ್ಷ ಪ್ರೀತಿಗಾಗಿ ಹಂಬಲಿಸುವ ಯಯಾತಿ, ಮಹಾರಾಣಿ, ತನ್ನ ಪ್ರತಿಷ್ಠೆಗಾಗಿ ಹಪಾಹಪಿಸುವ ದೇವಯಾನಿಯ ಕೈ ಹಿಡಿಯುತ್ತಾನೆ. ಇವರ ದಾಂಪತ್ಯದ ಆರಂಭದ ಕ್ಷಣದಲ್ಲೇ ತನ್ನ ರೂಪದ ಜೊತೆಗೆ ಮಹತ್ವಾಕಾಂಕ್ಷೆ ಬಲದಿಂದ ಯಯಾತಿಯ ಮೇಲೆ ವಿಜಯ ಸಾಧಿಸಿದಂತಾಗುತ್ತದೆ. ಇವರದ್ದು ಅನ್ಯೋನ್ಯ ಸರಸದ ದಾಂಪತ್ಯವಾಗದೆ ಪರಸ್ಪರ ಸ್ಪರ್ಧೆಯ, ಸೇಡಿನ ಬದುಕಾಗುತ್ತದೆ. ದೇವಯಾನಿ ಕಚನ ಪ್ರೀತಿ ಬಯಸಿದಳು; ಆದರೆ ಅದು ದೊರೆಯಲಿಲ್ಲ. ಯಯಾತಿಗೆ ದೇವಯಾನಿಯ ಉತ್ಕಟವಾದ ಪ್ರೀತಿ ಸಿಗಲಿಲ್ಲ. ಇದರಿಂದ ಅತೃಪ್ತನಾದ ಯಯಾತಿ ಭೋಗ ಜೀವನಕ್ಕೆ ತಳ್ಳಲ್ಪಡುತ್ತಾನೆ.

ಕಚನ ಪ್ರೀತಿಯಿಂದ ತಿರಸ್ಕರಿಸಲ್ಪಟ್ಟ ದೇವಯಾನಿ ತನ್ನ ಮನಸ್ಥಿತಿಯನ್ನು ಹೀಗೆ ಹೊರಗೆಡವುತ್ತಾಳೆ. “ಗಂಡಸರು ಯಾವಾಗಲೂ ಹೀಗೆಯೇ, ಕೃತಘ್ನರು, ಕಪಟಿಗಳು, ಕಠೋರರು, ಕಲ್ಲು ಹೃದಯದವರು, ಬಲೆಯನ್ನೇ ಎತ್ತಿಕೊಂಡು ಹಾರಿಹೋಗುವ ಹಕ್ಕಿಗಳಂತೆ ಅವರು ಲೀಲಾಜಾಲವಾಗಿ ಹೊರಟು ಹೊಗುತ್ತಾರೆ! ಹೆಂಗಸರು ಮಾತ್ರ ಪ್ರೀತಿ ಪಾಶದಲ್ಲಿ ತಮ್ಮ ಹೃದಯಗಳನ್ನು ತೊಡಕಿಸಿಕೊಂಡು ಅಳುತ್ತ ಕುಳಿತಿರುತ್ತಾರೆ![೩೦]. ದೇವಯಾನಿಯ ಈ ಮಾತುಗಳು ಪ್ರೇಮಿಗಳ ವಿರಹವನ್ನು ಮತ್ತು ಭಗ್ನಪ್ರೇಮಿ ಹೆಣ್ಣಿನ ದುರ್ಬಲ ಮನಸ್ಥಿತಿಯ ಸೂಚಕವಾಗುತ್ತವೆ. ಆದರೆ ದೇವಯಾನಿ ದಿಟ್ಟೆಯಾಗಿ ಈ ಮೇಲಿನ ಪರಿಸ್ಥಿತಿಯಿಂದ ಹೊರತಾಗಿದ್ದಾಳೆ. ಅವಳು ದುರ್ಬಲ ಹೆಣ್ಣಿನ ಮನಸ್ಸನ್ನು ದೂಷಿಸುತ್ತಾಳೆ. ಹಠದಿಂದ ಬದುಕಿ ಸಾಧಿಸಬೇಕು ಎಂಬ ನಿಲುವಿಗೆ ಬರುತ್ತಾಳೆ. ‘ಅಳುವುದರಲ್ಲಿ, ಕಣ್ಣೀರು ಹಾಕುವುದರಲ್ಲಿ ಆನಂದವಿರುತ್ತದೆಯೇ? ಇರಲಾರದು. ಅದು ಯಾವುದೋ ದುರ್ಬಲ ಮನಸ್ಸಿನ ಲಕ್ಷಣ! ಮಹಾರಾಣಿಯಾಗಿದ್ದ ದೇವಯಾನಿ ಅಳುವುದೇ? ಅದು ಕೂಡ ಯಾವುದೋ ಹಳೆಯ ಕಾಲದ ನೆನೆಹುಗಳನ್ನು ಕೆದಕಿಕೊಂಡು! ಅದು ಸಾಧ್ಯವಿಲ್ಲ! ಮಹಾರಾಣಿ ದೇವಯಾನಿ ತನ್ನನ್ನು ಭೇಟಿಯಾಗಬೇಕೆಂದು ಒಬ್ಬ ಋಷಿಯನ್ನು ಆಗ್ರಹಪಡಿಸುವುದೇ? ಅದು ಆಕೆಯಿಂದ ಕಾಲತ್ರಯದಲ್ಲಿಯೂ ಆಗದು’[೩೧]. ಇದು ದೇವಯಾನಿಯ ದೃಢ ನಿರ್ಧಾರಕ್ಕೆ ಮತ್ತು ಅವಳ ಅಹಂಕಾರ, ಸೇಡಿಗೆ ಹಿಡಿದ

ಕನ್ನಡಿಯಂತಿದೆ. ಶುಕ್ರಾಚಾರ್ಯ ತನ್ನ ಸೇಡು, ಕೋಪ, ಅಹಂಕಾರ ಮದದಿಂದಾಗಿ ಲೋಕವನ್ನು ಉಳಿಸಲು ತಪಸ್ಸನ್ನಾಚರಿಸದೆ, ನಾಶದ ಉದ್ದೇಶಕ್ಕೆ ತನ್ನ ತಪಸ್ಸನ್ನಾಚರಿಸುತ್ತಾನೆ. ಅದೇ ಮುಂದೆ ಶುಕ್ರಾಚಾರ್ಯನ ಅವಮಾನಕ್ಕೆಡೆ ಮಾಡುತ್ತದೆ. ಹಾಗೆಯೇ ದೇವಯಾನಿಯ ಸಂಸಾರ ದಿಕ್ಕಾಪಾಲಾಗಲು ಈ ಶುಕ್ರಾಚಾರ್ಯನ ಕೋಪ, ಶಾಪ ಒಂದು ರೀತಿಯಲ್ಲಿ ಕಾರಣವಾಗುತ್ತದೆ. ಯಯಾತಿಯ ವಿವಾಹವಾದ ಮೊದಲನೆ ದಿನ ತನ್ನ ದಾಂಪತ್ಯ ಜೀವನದ ಸುಮಧುರ ಕ್ಷಣಗಳನ್ನು ಆಲಂಗಿಸಬೇಕಾದ ಸಂದರ್ಭದಲ್ಲಿ ಯಯಾತಿ ಮದ್ಯವನ್ನು ಕುಡಿದಿದ್ದ ಎಂಬ ಕಾರಣಕ್ಕೆ ದೇವಯಾನಿ ತನ್ನ ತಂದೆಯ ಮೇಲೆ ಆಣೆ ಮಾಡಿಸಿಕೊಳ್ಳುತ್ತಾಳೆ. "ಇಲ್ಲಿ ಶಯನ ಮಂದಿರದಲ್ಲಿ ನನ್ನ ಬಾಯಿಂದ ಇನ್ನು ಮುಂದೆ ಎಂದಿಗೂ ಮದ್ಯದ ವಾಸನೆ ಬರಲಾರದು. ಅಷ್ಟು ಸುಲಭವಾದ ಮಾತಲ್ಲ ಅದು ತಂದೆಯವರ ಪಾದಸಾಕ್ಷಿಯಾಗಿ ಆಣೆಯನಿಟ್ಟುಕೊಂಡು ವಚನ ಕೊಡಬೇಕು'[೨೨]. ಇಲ್ಲಿ ದೇವಯಾನಿಗೆ ತನ್ನ ತಂದೆಯೇ ಮುಖ್ಯವಾಗುತ್ತಾನೆ. ಹಾಗೆಯೇ ತಾನು ಬ್ರಾಹ್ಮಣಿ, ಮೇಲು ಕುಲದವಳೆಂಬ ದರ್ಪ ಕಾಣುತ್ತದೆ. ಅಂದಿನಿಂದ ಯಯಾತಿ ಪ್ರೀತಿಯಲ್ಲಿ ಅತೃಪ್ತನಾಗಿಯೇ ಉಳಿದದ್ದು ಶೋಚನೀಯ.

ದೇವಯಾನಿಯಿಂದ ಪ್ರೀತಿಯಲ್ಲಿ ಅತೃಪ್ತನಾದ ಯಯಾತಿ ಶರ್ಮಿಷ್ಠೆಯಲ್ಲಿ ನಿಜವಾದ, ಪ್ರಾಮಾಣಿಕವಾದ, ಉತ್ಕಟವಾದ ಪ್ರೀತಿಯನ್ನು ಪಡೆಯುತ್ತಾನೆ. ಆ ಮೂಲಕ ಮಹಾತ್ಯಾಗಿಯಾದ 'ಪುರು'ವಿನ ಜನ್ಮಕ್ಕೂ ಕಾರಣನಾಗುತ್ತಾನೆ. ಆದರೆ ಶರ್ಮಿಷ್ಠೆ ಯಯಾತಿಯಿಂದ ಒದಗುವ ಯಾವ ಸಂಕಷ್ಟಗಳಿಗೂ ಅವಳು ಶಪಿಸುವುದಿಲ್ಲ. ಬದಲಾಗಿ ಅವಳಿಗೆ ಬಂದಂತಹ ಸಂಕಟಕ್ಕಾಗಿ ಮರುಗುತ್ತಾಳೆ.

'ಯಯಾತಿಯ ಪ್ರೀತಿಯ ಸಿಂಚನಕ್ಕೆ ಒಳಗಾದ ಶರ್ಮಿಷ್ಠೆ ಮಹಾರಾಜರ ಎದೆಯ ಮೇಲೆ ನನ್ನ ತಲೆಯನ್ನಿರಿಸಿ ಚಂದ್ರನನ್ನು ದಿಟ್ಟಿಸಿ ನೋಡಿದೆ. ಆತ ಸೂಸುತ್ತಿದ್ದ ಬೆಳದಿಂಗಳು ನನ್ನ ಅಂಗಾಂಗಳಲ್ಲಿಯೂ ಹರಿಯತೊಡಗಿತ್ತು. ಅದು ಬೆಳದಿಂಗಳೇ ಆಗಿರಲಿಲ್ಲ. ಪೃಥ್ವಿ-ನಿದ್ರೆ ಹೋಗಿ ಕಾಣುತ್ತಿದ್ದ ಸಫಲ ಪ್ರೀತಿಯ ಕನಸುಗಳ ಸುಗಂಧವಾಗಿ ಅದು! ಆ ಸುಗಂಧದಲ್ಲಿ ನಾನು ಬೆರೆತು ಹೋಗಿದ್ದೆ. ಪೂರ್ತಿಯಾಗಿ ಕರಗಿ ಹೋಗಿದ್ದೆ. ಈಗ ಶರ್ಮಿಷ್ಠೆ ರಾಜ ಕನ್ಯೆಯಾಗಿರಲಿಲ್ಲ. ದಾಸಿಯೂ ಆಗಿರಲಿಲ್ಲ. ವೃಷಪರ್ವ ಮಹಾರಾಜನ ಮಗಳಾಗಿರಲಿಲ್ಲ. ತಪಸ್ವಿಯಾದ ಕಚನ ತಂಗಿಯೂ ಆಗಿರಲಿಲ್ಲ. ಆಕೆ ಒಬ್ಬ ಪ್ರಣಯಿನಿ ಮಾತ್ರವಾಗಿದ್ದಳು'[೨೩]. ಅವಳು ಯಯಾತಿಯೊಂದಿಗೆ ಕೆಲವೇ ಕೆಲವು ರಾತ್ರಿಗಳನ್ನು ಕಳೆದರೂ ಅವಳು ಯಯಾತಿಯನ್ನು ಮನಃಪೂರ್ತಿಯಾಗಿ ಪ್ರೀತಿಸಿದ್ದಳು; ಯಯಾತಿಯೂ ಕೂಡ.

## ಕೊನೆ ಟಿಪ್ಪಣಿಗಳು

೧. ಯಯಾತಿ, ಪುಟ ೧

೨. ಅದೇ, ಪುಟ ೫

೩. ಅದೇ, ಪುಟ ೬

೪. ಅದೇ, ೨೩

೫. ಅದೇ, ಪುಟ ೨೭

೬. ಅದೇ, ಪುಟ ೫೬

೭. ಅದೇ, ೬೦

೮. ಅದೇ, ಪುಟ ೬೦

೯. ಅದೇ, ಪುಟ ೮೨

೧೦. ಅದೇ, ೧೪೩

೧೧. ಅದೇ, ಪುಟ ೨೧೧

೧೨. ನವನೀತ, ಪುಟ ೧೪೩

೧೩. ಅದೇ, ೧೫೪

೧೪. ಅದೇ, ಪುಟ ೧೦೮

೧೫. ಅದೇ, ೧೦೮

೧೬. ಅದೇ, ೧೧೪

೧೭. ಅದೇ, ಪುಟ ೧೧೫

೧೮. ನವನೀತ, ಪುಟ ೧೨೦

೧೯. ಅದೇ, ೯೫

೨೦. ಅದೇ, ಪುಟ ೨೧೭

೨೧. ಅದೇ, ೨೧೭

೨೨. ಅದೇ, ಪುಟ ೨೫೦

೨೩. ಅದೇ, ೨೫೩

# ಅಧ್ಯಾಯ ಐದು

# ತತ್ವ ಮೀಮಾಂಸೆ

**ಯ**ಯಾತಿ ಕಾದಂಬರಿಯು ಯತಿಧರ್ಮ ಹಾಗೂ ರಾಜಧರ್ಮವನ್ನು ಅತ್ಯಂತ ಮೇರುಹಂತದಲ್ಲಿ ನಿರೂಪಿಸಿದೆ. ಪ್ರತಿಯೊಂದು ಪಾತ್ರದ ಒಳಹೊರಗಿನ ಸ್ವಭಾವಗಳನ್ನು ಅನಾವರಣ ಮಾಡುತ್ತಾ, ಇಡೀ ಮಾನವ ಕುಲದ ಕಥೆಯನ್ನು ತೆರೆದಿಡುತ್ತಾ ಸಾಗಿದೆ. ಆದರೆ ಇಡಿಯಾಗಿ ಕಥೆಯ ಹಂದರ ಕೇವಲ ಈ ಎರಡು ಜಗತ್ತುಗಳ ಒಳಹೊರಗನ್ನು ನಿರೂಪಿಸುವುದಕ್ಕೆ ಮಾತ್ರ ಸೀಮಿತವಾಗುವುದಿಲ್ಲ ಎಂಬುದು ಗಮನಿಸಬೇಕಾದ ಅಂಶ. ಸನ್ನಿವೇಶ ನಿರ್ಮಾಣದಲ್ಲಿ, ಸಂಭಾಷಣೆಯ ಸ್ವರೂಪದಲ್ಲಿ ಹಾಗೂ ಕಥೆಯನ್ನು ಒಂದು ಮಗ್ಗುಲಿನಿಂದ ಮತ್ತೊಂದು ಮಗ್ಗುಲಿಗೆ ಬದಲಾಯಿಸುವಲ್ಲಿ ಕೆಲವೊಂದು ಅಸಾಮಾನ್ಯವಾದ ಸಾಮಾಜಿಕ ತತ್ವಗಳನ್ನು ಅಲ್ಲಲ್ಲಿ ಸಂದರ್ಭಾನುಸಾರ ನಿರೂಪಿಸುತ್ತಾ ಸಾಗಿದೆ. ಇದು ಕಾದಂಬರಿಯ ಆಶಯವೂ ಆಗಿರುವಂತಿದೆ. ಅಂತಹ ಕೆಲವು ಮುಖ್ಯವಾದ ತತ್ವಗಳನ್ನು ಈ ಮುಂದಿನಂತೆ ಗುರುತಿಸುತ್ತಾ ಹೋಗಬಹುದು.

‘ಪ್ರಪಂಚದಲ್ಲಿ ಎಲ್ಲ ವಿಷಯಗಳೂ ಮನುಷ್ಯನಿಗೆ ಸರಿಯಾದ ಸಮಯಕ್ಕೆ ಗೊತ್ತಾಗುತ್ತವೆ. ಗಿಡದ ಮೇಲೆ ಎಲೆಗಳ ಜೊತೆಯಲ್ಲಿಯೇ ಹೂವಾಗಲಿ, ಹೂವುಗಳ ಜೊತೆಯಲ್ಲಿಯೇ ಹಣ್ಣಾಗಲಿ ಕಾಣಿಸಿಕೊಳ್ಳುವುದಿಲ್ಲ’[1].

ಈ ಲೋಕದಲ್ಲಿ ನಿಜವಾದ ಆನಂದ ಒಂದೇ. ಬ್ರಹ್ಮಾನಂದ! ದೇಹದ ಸುಖ ದುಃಖಕ್ಕೆ ಕಾರಣ. ಆ ಸುಖ ಸ್ಪರ್ಶದ್ದಾಗಿರಬಹುದು; ದೃಷ್ಟಿಯದ್ದಾಗಿರಬಹುದು. ದೇಹ ಮನುಷ್ಯನ ಪರಮ ಶತ್ರು, ಅದನ್ನು ಗೆಲ್ಲುವ ನಿತ್ಯ ಯತ್ನದಲ್ಲಿ ತೊಡಗಿರುವುದೇ ಮನುಷ್ಯನ ಮೊದಲ ಕರ್ತವ್ಯವಾಗಿದೆ. ನಾನು ತಿನ್ನುವ ಈ ಹಣ್ಣುಗಳನ್ನು ನೋಡು’[2].

'ಮನುಷ್ಯನ ನಾಲಿಗೆಗೆ ಸಿಹಿಯಾದ ಹಣ್ಣು ರುಚಿಯೆನಿಸುತ್ತದೆ. ಅಂಥವನ್ನೇ ಅದಕ್ಕೆ ನಾವು ಕೊಡುತ್ತ ಹೋದ ಹಾಗೆ ನಮ್ಮ ಮನಸ್ಸಿನಲ್ಲಿ ಆಸಕ್ತಿ ಹುಟ್ಟಿಕೊಳ್ಳುತ್ತದೆ. ಆಸಕ್ತಿಯಿಂದಾಗಿ ಮನುಷ್ಯ ದೇಹದ ಪೂಜಕನಾಗುತ್ತಾನೆ. ದೇಹದ ಪೂಜೆ ಮಾಡುವವನ ಆತ್ಮ ಬಧಿರವಾಗುತ್ತ ಹೋಗುತ್ತದೆ. ಮನುಷ್ಯನ ಆತ್ಮ ಜಾಗೃತವಾಗುವುದು ವಿರಕ್ತಿಯಿಂದ ಮಾತ್ರ, ಅಂಥ ವಿರಕ್ತಿಗಾಗಿಯೇ ನಾನು ಈ ಕಹಿಯಾದ ಹಣ್ಣುಗಳನ್ನು ಬಾಯಿ ಚಪ್ಪರಿಸುತ್ತ ತಿನ್ನುತ್ತಿರುವುದು'[೩]

'ನಾಚಿಕೆ ಸೌಂದರ್ಯಕ್ಕೊಂದು ಅಲಂಕಾರ; ಸತ್ಯಕ್ಕಲ್ಲ. ಸತ್ಯ ಬೆತ್ತಲೆಯಾಗಿರುತ್ತದೆ; ಅದೇ ಹುಟ್ಟಿ ಬಂದ ಮಗುವಿನಂತಿರುತ್ತದೆ. ಅದು ಹಾಗೆ ಇರಲೇಬೇಕಾಗುತ್ತದೆ. ಮೋಹದ ಮೊದಲ ಕ್ಷಣವೆಂದರೆ ಪಾಪದ ಮೊದಲ ಮೆಟ್ಟಿಲು'[೪].

'ಯಯಾತಿ, ಜೀವಿಸಿದವನಿಗೆ ಸಾವು ಅಪ್ರಿಯವಾಗಿದ್ದಷ್ಟೂ ಅಪರಿಹಾರ್ಯವೂ ಆಗಿದೆ. ಹುಟ್ಟಿನಂತೆ ಅದಾದರೂ ಸೃಷ್ಟಿಚಕ್ರದ ಒಂದು ರಹಸ್ಯಮಯವಾದ, ನಾಟ್ಯ ಪೂರ್ಣವಾದ ಭಾಗವಾಗಿದೆ. ವಸಂತ ಋತುವಿನಲ್ಲಿ ಗಿಡಮರಗಳ ಮೇಲೆ ಇಣುಕುವ ನಸುಗೆಂಪು ಬಣ್ಣದ ಕೋಮಲವಾದ ಚಿಗುರು ಆದಿಶಕ್ತಿಯ ಲೀಲೆಯ ಒಂದು ಆವಿಷ್ಕಾರವಾಗಿದ್ದಂತೆ ಚಳಿಗಾಲದಲ್ಲಿ ಉದುರಿ ಬೀಳುವ ಹಣ್ಣೆಲೆಗಳು ಕೂಡ ಅದರ ಲೀಲೆಯ ಇನ್ನೊಂದು ಅವಿಷ್ಕಾರವೇ ಆಗಿದೆ. ಸಾವನ್ನು ನಾವು ಅಂಥ ದೃಷ್ಟಿಯಿಂದಲೇ ಕಾಣಬೇಕಾಗುತ್ತದೆ. ಉದಯಾಸ್ತ, ಗ್ರೀಷ್ಮ-ವರ್ಷಾಕಾಲ, ಬೆಳಕು-ಕತ್ತಲು, ಹಗಲು-ರಾತ್ರಿ, ಸ್ತ್ರೀ-ಪುರುಷ, ಸುಖ-ದುಃಖ, ಶರೀರ-ಆತ್ಮ, ಬದುಕು ಮತ್ತು ಸಾವು ಇವೆಲ್ಲವೂ ಅಭೇದ್ಯವಾದ ಜೋಡಿಗಳಾಗಿವೆ. ಇದು ಜೀವನದ ದ್ವಂದ್ವಾತ್ಮಕವಾದ ವ್ಯಕ್ತಸ್ವರೂಪ. ಈ ಎಲ್ಲ ಹಾಸುಹೊಕ್ಕಿನ ಎಳೆಗಳಿಂದಲೇ ವಿಶ್ವದ ವಿಲಾಸ ಹಾಗೂ ವಿಕಾಸದ ವಸ್ತ್ರವನ್ನು ಆದಿಶಕ್ತಿ ಹೆಣೆಯುತ್ತಿರುತ್ತದೆ'[೫].

'ಬದುಕು ಎಷ್ಟು ಭೀಷಣ! ಎಷ್ಟು ವಿರೋಧಪೂರ್ಣ! ಕನಸಿಗಿಂತ ನನಸು ಕಠೋರವಾಗಿರುತ್ತದೆ'[೬].

ವಿವಿಧತೆಯೇ ಜೀವನದ ದೇಹ. ಪರಸ್ಪರ ವಿರೋಧಿಯಾದ ಸಂಗತಿಗಳೇ ಅದರ ಆತ್ಮ. ಅದರ ರಸ. ಅದರ ಆನಂದಾನುಭವ. ಅದರ ಮೋಡಿ. ಅದರ ಆತ್ಮ ಇರುವುದು ಈ ವಿವಿಧತೆಯಲ್ಲಿ, ಈ ವಿರೋಧದಲ್ಲಿ![೭].

'ಮನುಷ್ಯ ಪ್ರೀತಿಯನ್ನು ಒದೆದು ಬಿಡಬಹುದು; ಆದರೆ ಆತ ಅದನ್ನು ಮರೆಯುವುದು ಸಾಧ್ಯವೇ?[೮]. 'ವಿಚಾರದ ಸಹಾಯದಿಂದ ವಿಕಾರದ ಮೇಲೆ ವಿಜಯವನ್ನು ಗಳಿಸುವುದೇ

ನಿಜವಾದ ಮನುಷ್ಯಧರ್ಮ!'[೧೦].

'ನಿಸರ್ಗ ಮತ್ತು ಈಶ್ವರ ಇವರ ನಡುವಿನ ಅತ್ಯಂತ ಶ್ರೇಷ್ಠವಾದ ಸಂಬಂಧ ಸೂತ್ರವೆಂದರೆ ಮನುಷ್ಯ. ಈಶ್ವರ ಎಲ್ಲ ದ್ವಂದ್ವಗಳಾಚೆಯಲ್ಲಿರುವವ. ನಿಸರ್ಗಕ್ಕೆ ದ್ವಂದ್ವದ ಕಲ್ಪನೆಯೇ ಇಲ್ಲ. ಅದಿರುವುದು ಕೇವಲ ಮನುಷ್ಯನಿಗೆ. ನೀರಡಿಸಿ ಬಂದವನಿಗೆ ನೀರನ್ನು ಒದಗಿಸಿ ಸಮಾಧಾನ ಪಡಿಸಬಲ್ಲ ನದಿಯೇ ಹೆಚ್ಚಿನ ಆಳಕ್ಕಿಳಿದರೆ ಆತನನ್ನು ನುಂಗಿಬಿಡುತ್ತದೆ. ನಿಸರ್ಗದಲ್ಲಿಯ ದ್ವಂದ್ವಗಳ ಅರಿವು ಹುಟ್ಟಿಕೊಳ್ಳುವುದು ಮನುಷ್ಯನ ಮನಸ್ಸಿನಲ್ಲಿ ಮಾತ್ರ. ಆ ಮನಸ್ಸು ವಿಕಾಸವಾಗುತ್ತ ಹೋದಹಾಗೆ ಆ ಅರಿವು ಹೆಚ್ಚು ಸೂಕ್ಷ್ಮವಾಗುತ್ತ, ವಿಶಾಲವಾಗುತ್ತ ಹೋಗುತ್ತದೆ. ಬದುಕಬೇಕೆಂಬ ದುರ್ದಮ್ಯವಾದ ಆಸೆ, ಅದಕ್ಕಾಗಿ ನಿರಂತರವಾಗಿ ನಡೆಸಬೇಕಾದ ಹೋರಾಟ, ಎರಡೂ ಮನುಷ್ಯನಿಗೆ ನಿಸರ್ಗದಿಂದ ಬಂದ ಬಳುವಳಿ. ಆದರೆ ಮನುಷ್ಯ ಕೇವಲ ಪಶುವಿನಂತೆ ಬದುಕಲಿಚ್ಛಿಸುವುದಿಲ್ಲ. ಚೆನ್ನಾಗಿ ಬಾಳಬೇಕು ಎಂದುಕೊಳ್ಳುತ್ತಾನೆ. ಯಾವುದು ಚೆನ್ನ, ಯಾವುದು ಅಲ್ಲ, ಎಂಬುದರ ಯೋಚನೆಗೆ ಸ್ವಾಭಾವಿಕವಾಗಿಯೇ ತೊಡಗುತ್ತಾನೆ. ಧರ್ಮ ಅಧರ್ಮಗಳ ಭೇದವನ್ನು ನಿಸರ್ಗ ಗುರುತಿಸುವುದಿಲ್ಲ. ಅದನ್ನು ಮನುಷ್ಯನು ಮಾತ್ರ ಮಾಡಬಲ್ಲವನಾಗಿರುತ್ತಾನೆ. ಒಬ್ಬ ತಾಯಿಯ ಒಂದೇ ಒಂದು ಮಗು ನೀರಲ್ಲಿ ಮುಳುಗುತ್ತಿರುವಾಗ ಅದರಿಂದ ನದಿಗೆ ತಿಲಮಾತ್ರವೂ ದುಃಖವಾಗಿರುವುದಿಲ್ಲ. ಆದರೆ ಅದೇ ವೇಳೆಗೆ ನೀರ ದಂಡೆಯಲ್ಲಿ ಮನುಷ್ಯನೊಬ್ಬ ನಿಂತಿದ್ದರೆ, ಬರೀ ಬದುಕಬೇದೆನ್ನುವುದಕ್ಕಿಂತ ಹೆಚ್ಚಿನ ಭಾವನೆಗಳನ್ನು ವಿಕಾಸಗೊಂಡಿದ್ದ ಮನುಷ್ಯ ಅಲ್ಲಿದ್ದರೆ, ಆತ ತನ್ನ ಜೀವವನ್ನೂ ಅಪಾಯಕ್ಕೊಡ್ಡಿ ಮಗುವನ್ನು ಬದುಕಿಸುವ ಪ್ರಯತ್ನವನ್ನು ಮಾಡುತ್ತಾನೆ'[೧೧].

'ಈ ಆತ್ಮ ಇರುವುದಾದರೂ ಎಲ್ಲಿ? ಎಂದು ನೀವು ಅನೇಕ ಸಲ ನಗುತ್ತ ಕೇಳಿದಿರಿ. ಆಗ ನಿಮ್ಮನ್ನು ಸಮಾಧಾನಪಡಿಸುವುದು ನನ್ನಿಂದಾಗಲಿಲ್ಲ; ಆದರೆ ನಮ್ಮ ಆದ್ಯ ಋಷಿಗಳು ಮಾನವ ಜೀವನದ ಸ್ವರೂಪವನ್ನು ಕುರಿತು ರಚಿಸಿದ ಒಂದು ರೂಪಕವನ್ನು ನೀವು ಸದಾಕಾಲವೂ ಮನಸ್ಸಿನಲ್ಲಿರಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ. ಆ ರೂಪಕ ಹೀಗೆ; 'ಮಾನವ ಜೀವನದಲ್ಲಿ ಆತ್ಮ ಎನ್ನುವುದು ರಥಿ (ರಥವನ್ನೇರಿದವ), ಶರೀರ ಆ ರಥ; ಬುದ್ಧಿ ಸಾರಥಿ ಮತ್ತು ಮನಸ್ಸು ಕಡಿವಾಣ. ವಿವಿಧ ಇಂದ್ರಿಯಗಳೇ ಕುದುರೆಗಳು, ಉಪಭೋಗದ ಎಲ್ಲ ವಿಷಯಗಳೇ ಮಾರ್ಗ, ಇಂದ್ರಿಯ ಹಾಗೂ ಮನಸ್ಸುಗಳಿಂದ ಯುಕ್ತವಾದ ಆತ್ಮನೇ ಅದನ್ನು ಉಪಭೋಗಿಸುವವ.' ರಥವಿಲ್ಲದಿದ್ದರೆ ಧನುರ್ಧಾರಿ ಕುಳಿತುಕೊಳ್ಳುವುದು ಎಲ್ಲಿ? ರಣಾಂಗಣಕ್ಕೆ ನುಗ್ಗುವುದು ಹೇಗೆ? ಶತ್ರುವಿನೊಂದಿಗೆ ಹೋರಾಡುವುದು ಹೇಗೆ? ಆದ್ದರಿಂದ ಮನುಷ್ಯ ರಥದಂತಿದ್ದ ತನ್ನ ಶರೀರವನ್ನು

ಕಡಿಮೆಯದೆಂದು ಭಾವಿಸಲೇಕೂಡದು[೧೨].

'ಮಹಾರಾಜ, ಒಂದು ಮಾತನ್ನು ಮನಸ್ಸಿನಲ್ಲಿರಿಸಿಕೋ, ಸ್ತ್ರೀಯರೊಡನೆಯ ಸ್ನೇಹ ಚಿರಕಾಲ ಬಾಳಲಾರದು. ಅವರ ಹೃದಯಗಳು ತೋಳಗಳ ಹೃದಯದಂತಿರುತ್ತವೆ[೧೩].

'ಸಂಯೋಗವಿಯೋಗಗಳ ಅದ್ಭುತವಾದ ರಸಾಯನಕ್ಕೆಯೆ ಬದುಕು ಎಂದು ಕರೆಯುತ್ತಾರೆಯೆ?'[೧೪]

'ಆತ್ಮದ ಉನ್ನತಿಗಾಗಿ ದೇಹವನ್ನು ದಂಡಿಸುವುದು ಅಥವಾ ದೇಹದ ಸುಖಕ್ಕಾಗಿ ಆತ್ಮವನ್ನು ಮರೆತೇಬಿಡುವುದು, ಎರಡೂ ತಪ್ಪು ದಾರಿಗಳೇ. ಈಶ್ವರ ನಿರ್ಮಿಸಿದ ಈ ಸೃಷ್ಟಿಯಲ್ಲಿಯ ವಿವಿಧ ಸೌಂದರ್ಯವನ್ನು ಅಪವಿತ್ರ ಅಥವಾ ಅಸ್ಪೃಶ್ಯ ಎಂದು ಹೇಗೆ ಹೇಳುವುದು? ಸ್ತ್ರೀ ಪುರುಷ ಸಂಬಂಧವಾದರೂ ದೇಹ ಮತ್ತು ಆತ್ಮಗಳ ಸಂಬಂಧದಂತೆಯೇ ಇದೆ. ಪರಸ್ಪರರನ್ನು ದ್ವೇಷಿಸಿಯಲ್ಲ, ಪರಸ್ಪರರನ್ನು ಉತ್ಕಟವಾಗಿ ಪ್ರೀತಿಸಿ, ತನ್ನನ್ನು ತಾನೇ ಪೂರ್ತಿಯಾಗಿ ಮರೆತುಬಿಡಬಲ್ಲಂತೆ ಪ್ರೀತಿಸಿದಾಗ, ಸ್ತ್ರೀ ಪುರುಷರು ಸಂಸಾರದಲ್ಲಿಯೇ ಸ್ವರ್ಗಸುಖವನ್ನು ಪಡೆಯುತ್ತಾರೆ[೧೫].

'ಯೌವನ ಒಂದು ಬರೀ ವರವಾಗಿರದೆ ಅದು ಶಾಪವೂ ಆಗಿದೆ. . . ನಿಸರ್ಗ ಮತ್ತು ಮನುಷ್ಯನ ನಡುವೆ ನಿಕಟವಾದ, ಅನ್ಯೋನ್ಯವಾದ ಸಂಬಂಧವಿದೆ. ಅವಳಿಗಳು ಅವರು. ಹಾಗೆಂದೇ ನಿಸರ್ಗದ ಸಹವಾಸದಲ್ಲಿದ್ದ ಮನುಷ್ಯನೆದುರು ಬದುಕು ತನ್ನ ನಿಜಸ್ವರೂಪದಲ್ಲಿ ಪ್ರಕಟವಾಗುತ್ತದೆ. ಜೀವನದ ಶಕ್ತಿ ಎಲ್ಲಿಯದು, ಅವರ ಮಿತಿಮೇರೆಗಳು ಯಾವವು ಎನ್ನುವುದು ಮನುಷ್ಯನಿಗೆ ಅಲ್ಲಿ ತಿಳಿಯತೊಡಗುತ್ತದೆ. ನಿಸರ್ಗದಿಂದ ಮನುಷ್ಯ ದೂರವಾದ ಹಾಗೆ ಆತನ ಕಲ್ಪನೆಗಳು, ಭಾವನೆಗಳು, ಅಂತರಂಗದ ಆಸೆಗಳೆಲ್ಲವೂ ಅವಾಸ್ತವವಾಗುತ್ತವೆ. ವಿಕೃತ ಸ್ವರೂಪವನ್ನು ತಾಳುತ್ತವೆ. ಹೀಗಾಗಿ ನನ್ನ ದುರ್ದೈವ ಒಂದು ದೃಷ್ಟಿಯಿಂದ ನನ್ನ ಸುದೈವ ಎನ್ನುವಂತಾಯಿತು. ಜೀವನದ ಮೂಲದಲ್ಲಿಯ ಸತ್ಯದ ದರ್ಶನ ನನಗೆ ಸಿಕ್ಕುವಂತಾಯಿತು'[೧೬].

'ಕಲಾವಿದನ ದುಃಖದಿಂದಲೇ ಕಲೆ ಹೆಚ್ಚು ಜೀವಂತವಾಗಿ, ಹೆಚ್ಚು ಸುಂದರವಾಗಿ, ಹೆಚ್ಚು ರಸಪೂರ್ಣವಾಗಿ ರೂಪುಗೊಳ್ಳುತ್ತದೆಯೆ? ಕಲಾವಿದ ದುಃಖಿತನಾಗಿಯೇ ಇರಬೇಕು ಎನ್ನುವುದು ಸೃಷ್ಟಿಯ ಅಲಿಖಿತ ನಿಯಮವೇ ಆಗಿದೆಯೆ? ಯಾರು ಹೇಳಬೇಕು?' . . 'ಕಲೆಯ ಪ್ರಪಂಚ ವಿಕಾರಗಳ ಆಚೆಯಲ್ಲಿ, ವಿಚಾರಗಳ ಆಚೆಯಲ್ಲಿ, ವಾಸನೆಗಳ ಆಚೆಯಲ್ಲಿ, ಕ್ಷಣಿಕವಾದುದರ ಎಲ್ಲದರ ಆಚೆಯಲ್ಲಿ ಇರುತ್ತದೆ ಎಂದು ಕಾಣುತ್ತದೆ'[೧೭].

'ಶರೀರದ ದೃಷ್ಟಿಯಿಂದ ಮನುಷ್ಯರು ಎಷ್ಟು ಹತ್ತಿರ ಬಂದರೂ ಮಾನಸಿಕವಾಗಿ ಒಬ್ಬರೊಬ್ಬರಿಂದ ಅವರು ದೂರದೂರವಾಗಿಯೇ ಇರಬಲ್ಲವರಾಗಿರುತ್ತಾರೆ!'[೧೮].

'ಜೀವನದ ಕ್ಷಣಭಂಗುರವಾದದ್ದು. ಯಾವ ಗಳಿಗೆಯಲ್ಲಿ ಸಾವು ಬಂದೀತೆಂದು ಹೇಳಲಾಗುವುದಿಲ್ಲ. ಹಾಗೆಂದೇ ತನಗೆ ಸಿಕ್ಕ ಪ್ರತಿಯೊಂದು ಕ್ಷಣವನ್ನೂ ಸುವರ್ಣ ಕ್ಷಣವೆಂದು ತಿಳಿಯಲೇಬೇಕು; ಅದರಲ್ಲಿಯ ರಸ, ಗಂಧ, ಆನಂದಾದಿಗಳನ್ನು ತೀರ ಕಠೋರವಾಗಿ ಹಿಸುಕಿ, ಹೀರಿಕೊಂಡು ಮನುಷ್ಯ ತನ್ನ ಸುಖದ ಬಯಕೆಯನ್ನು ಈಡೇರಿಸಿಕೊಳ್ಳಬೇಕು'[೧೯].

ಈ ಮೇಲಿನ ಉಲ್ಲೇಖಗಳು ಯಯಾತಿ ಕಾದಂಬರಿಯ ಒಂದೊಂದು ಸನ್ನಿವೇಶದಲ್ಲಿ ಆಯಾ ಸನ್ನಿವೇಶದ ಆಳ ಅಗಲಗಳನ್ನು, ಅದರ ಗಾಂಭೀರ್ಯವನ್ನು ಹೆಚ್ಚಿಸಲು ನಿರೂಪಿತವಾಗಿವೆ. ಆದರೆ ಅವುಗಳ ಉದ್ದೇಶ ಅಷ್ಟಕ್ಕೆ ಮಾತ್ರವೇ ಸೀಮಿತವಾಗುವುದಿಲ್ಲ. ಮೇಲಿನ ಹೇಳಿಕೆಗಳನ್ನು ಕಾದಂಬರಿಯ ಆಯಾ ಸನ್ನಿವೇಶಗಳಿಂದ ಬೇರ್ಪಡಿಸಿ ನೋಡಲೂ ಕೂಡ ಸಾಧ್ಯವಿದೆ. ಹಾಗೆ ಬೇರ್ಪಡಿಸಿ ನೋಡಿದಾಗ, ಅವುಗಳು ಎಲ್ಲಾ ಕಾಲದ ಮಾನವ ಜಗತ್ತಿಗೆ ಇಡಿಯಾಗಿ ಅನ್ವಯವಾಗುವಂತಹ ತಾತ್ವಿಕ ಶಕ್ತಿಯನ್ನು ಪಡೆದಿರುವುದು ನಮ್ಮ ಗಮನಕ್ಕೆ ಬರುತ್ತದೆ. ಇದೇ ಸಮಯದಲ್ಲಿ ಈ ಕುರಿತು ಇನ್ನೊಂದು ಆಯಾಮವನ್ನು ಗಮನಿಸಬೇಕು. ಮೇಲೆ ಉಲ್ಲೇಖಿಸಿದ ಅಷ್ಟೂ ಹೇಳಿಕೆಗಳು ಎಲ್ಲಿಯೂ ಒಣ ಉಪದೇಶಗಳ ಹಾಗೆ ಕಾಣುವುದಿಲ್ಲ. ಯಾಂತ್ರಿಕ ಘೋಷಣೆಗಳ ಹಾಗೆ ಗೋಚರಿಸುವುದಿಲ್ಲ. ಬದಲಿಗೆ ಕಾದಂಬರಿಯ ಭಾಷಿಕ ಜಗತ್ತಿನ ಸಂವೇದನಾಶೀಲತೆಯಲ್ಲಿ ಬೆರೆತುಕೊಂಡೇ ಆ ಮೂಲಕ ಮಾನವ ಲೋಕವನ್ನು ಅರಿಯುವ ಅಸಾಮಾನ್ಯ ಸೂಕ್ಷ್ಮ ತಿಳಿವು, ಅರಿವು ಮೇಲಿನ ಉಲ್ಲೇಖಗಳಲ್ಲಿ ನಿರೂಪಿತವಾಗಿದೆ.

ಮೇಲಿನ ಉಲ್ಲೇಖಗಳು ಒಂದು ಕಡೆ ಕಾದಂಬರಿಯ ಪಾತ್ರಗಳ ಒಳತೋಟಿಗೆ ಸಂಬಂಧಿಸಿದ್ದರೆ, ಮತ್ತೊಂದು ಕಡೆ ಅವೇ ಉಲ್ಲೇಖಗಳು ಕಾದಂಬರಿಯ ಹೊರಗಿನ ಜಗತ್ತಿಗೂ ಸಹಜವಾಗಿ ಅನ್ವಯವಾಗುವಂತಹ ಪರಿಣಾಮಕಾರಿ ಶಕ್ತಿಯನ್ನು ಪಡೆದಿವೆ. ಹಾಗಾಗಿ ಮೇಲಿನ ಉಲ್ಲೇಖಗಳನ್ನು ಸುಭಾಷಿತಗಳ ಹಾಗೆಯೋ ಅಥವಾ ಉಪದೇಶಗಳ ಹಾಗೆಯೊ ಪರಿಗಣಿಸಬೇಕಾದ ಅವಶ್ಯಕತೆ ಇಲ್ಲ.

## ಕೊನೆ ಟಿಪ್ಪಣಿಗಳು

೧. ಯಯಾತಿ, ಪುಟ ೨೫

೨. ಅದೇ, ಪುಟ ೪೭

೩. ಅದೇ, ಪುಟ ೪೯

೪. ಅದೇ, ೬೯

೫. ಅದೇ, ಪುಟ ೮೬

೬. ಅದೇ, ಪುಟ ೧೦೩, ೧೦೪

೭. ಅದೇ, ೧೪೯

೮. ಅದೇ, ಪುಟ ೧೬೨

೯. ಅದೇ, ಪುಟ ೨೦೭

೧೦. ಅದೇ, ೨೨೦

೧೧. ಅದೇ, ಪುಟ ೨೨೬

೧೨. ನವನೀತ, ಪುಟ ೨೨೭

೧೩. ಅದೇ, ೨೪೩

೧೪. ಅದೇ, ಪುಟ ೩೦೬

೧೫. ಅದೇ, ೩೧೫, ೩೧೬

೧೬. ಅದೇ, ೩೨೦

೧೭. ಅದೇ, ಪುಟ ೩೩೩

೧೮. ಅದೇ, ಪುಟ ೩೩೬

೧೯. ಅದೇ, ಪುಟ ೩೫೯

## ಅಧ್ಯಾಯ ಆರು

# ಮನಸಿನ ಒಳತೋಟಿ

ಯಯಾತಿ ಕಾದಂಬರಿಯು ಬೇರೆ ಬೇರೆ ಸನ್ನಿವೇಶಗಳಲ್ಲಿ ಬೇರೆ ಬೇರೆ ಪಾತ್ರಗಳ ಮಾನಸಿಕ ಒಳತೋಟಿಯನ್ನು ಅತ್ಯಂತ ಸಶಕ್ತಿವಾಗಿ ಬಿಚ್ಚಿಡುತ್ತಾ ಸಾಗಿದೆ. ಅತ್ಯಂತ ನಾಟಕೀಯವಾದ ಇಲ್ಲಿನ ನಿರೂಪಣೆಯು ಅಂತಹ ಸನ್ನಿವೇಶಗಳ ಚಿತ್ರಣವನ್ನು ಕಣ್ಣಿಗೆ ಕಟ್ಟಿದಂತೆ ಚಿತ್ರಿಸಿದೆ. ಕೆಲವೊಂದು ಪಾತ್ರಗಳು ಆಯಾ ಸನ್ನಿವೇಶಗಳಲ್ಲಿ ತಮ್ಮ ಬಗ್ಗೆ ತಾವೇ ಮನಸ್ಸಿನೊಳಗೆ ಅಂದುಕೊಳ್ಳುವುದಿದೆ. ಇನ್ನು ಕೆಲವು ಪಾತ್ರಗಳು ಬೇರೆ ಪಾತ್ರಗಳ ಕ್ರಿಯೆಯ ಬಗ್ಗೆಯೊ, ಅವರ ಸ್ವಭಾವದ ಬಗ್ಗೆಯೊ, ಅವರ ಚಟುವಟಿಕೆಯ ಬಗ್ಗೆಯೋ ಊಹಿಸುವುದಿದೆ. ಇಂತಹ ಹಲವು ಸ್ವಭಾವಗಳನ್ನು ಕಾದಂಬರಿಯ ಕೆಲವು ಪುಟಗಳು ಎಳೆಯೆಳೆಯಾಗಿ ಬಿಚ್ಚಿಟ್ಟಿವೆ. ಅರಮನೆಯಲ್ಲಿ ಯಯಾತಿಗೂ ಮತ್ತು ದೇವಯಾನಿಗೂ ಶಯನಗೃಹದಲ್ಲಿ ಜಗಳವಾಗುತ್ತದೆ. ಯಾಕೆಂದರೆ ಯಯಾತಿಯು ಮಧ್ಯವನ್ನು ಸೇವಿಸಿ ಶಯನಗೃಹಕ್ಕೆ ಹೋಗಿರುತ್ತಾನೆ. ಇದಕ್ಕೆ ದೇವಯಾನಿಯು ಅತ್ಯಂತ ಕಟುವಾಗಿ ವಿರೋಧ ಮಾಡುತ್ತಾಳೆ. ಇದರಿಂದ ಬೇಸರಗೊಂಡ ಯಯಾತಿಯು ಶಯನಗೃಹದಿಂದ ಅರಮನೆಯ ತನ್ನ ಮಹಲಿಗೆ ಬರುತ್ತಾನೆ. ನಂತರ ಯಯಾತಿಯ ಒಳಮನಸ್ಸಿನಲ್ಲಿ ಏನು ನಡೆಯಿತು ಎಂಬುದನ್ನು ಕಾದಂಬರಿಯು ಹೀಗೆ ನಿರೂಪಿಸಿದೆ. 'ಇನ್ನು ಕೆಲವು ಸಮಯದಲ್ಲಿ ಎಲ್ಲ ಕಡೆಯಲ್ಲಿಯೂ ಸ್ತಬ್ಧವಾಗುತ್ತದೆ. ಆವಾಗ ಅದುವರೆಗೆ ತನ್ನ ಮಹಲಿನಲ್ಲಿ ತಳಮಳಿಸುತ್ತ ಬಿದ್ದುಕೊಂಡಿರುವ ದೇವಯಾನಿ ಹೆಜ್ಜೆ ಸದ್ದು ಮಾಡದೆ ಮತ್ತೆ ನನ್ನ ಮಹಲಿಗೆ ಬರುತ್ತಾಳೆ. ಬಾಗಿಲನ್ನು ಮುಚ್ಚಿಕೊಂಡು ಬಂದು ಮಂಚದ ಮೇಲೆ ಕುಳಿತುಕೊಳ್ಳುತ್ತಾಳೆ. ನನ್ನ ಪಾದಗಳನ್ನು ನಯವಾಗಿ ಒತ್ತತೊಡಗುತ್ತಾಳೆ. ಆವಾಗ ಆಕೆಯನ್ನು ತಡೆದು ಹಿಡಿದು ನಾನು 'ಹುಚ್ಚಿಯಲ್ಲವೆ ನೀನು? ಬ್ರಹ್ಮ ನಿನ್ನ ಈ ಚೆಲುವಾದ ಕೈಗಳನ್ನು ನಿನ್ನ ಪಾದಗಳನ್ನು ಒತ್ತುವುದಕ್ಕೆಂದು ಮಾಡಿದ್ದಾನೆಯೆ?' ಎಂದು ಕೇಳಿದಾಗ ಆಕೆ ತುಂಬಿದ ಕಣ್ಣುಗಳಿಂದ ನನ್ನನ್ನು

ನೋಡುತ್ತಾ ತನ್ನ ದಿಂಬಿನಲ್ಲಿ ತಲೆಹಾಕಿ, ಮಗುವಿನಂತೆ ಅಲ್ಲಿಯೇ ತಲೆಯಾಡಿಸುತ್ತಾ 'ನಾನು ತಪ್ಪಿದೆ. ಸಿಟ್ಟಿನ ಭರದಲ್ಲಿ ಆಗಲೆ ನಾನು ಏನೇನೋ ಅಂದುಬಿಟ್ಟೆ, ನನ್ನನ್ನು ಕ್ಷಮಿಸಬೇಕು, ಕ್ಷಮಿಸುವಿರಲ್ಲವೆ?' ಎನ್ನುತ್ತಾಳೆ. ಆಗ ನಾನು ಆಕೆಯ ತಲೆಯನ್ನು ಮೃದುವಾಗಿ ತಟ್ಟುತ್ತ ಹೇಳುವೆ, 'ನಾನು ನಿನ್ನನ್ನು ಕ್ಷಮಿಸುವುದೆ? ಅಂದರೆ ನಾನು ಮತ್ತು ನೀನು ಬೇರೆಯಾಗಿದ್ದೇವೆಯೆ? ಹುಚ್ಚಿ! ನೀನು ಮತ್ತು ನಾನು ಬೇರೆಯಲ್ಲ, ಒಂದನ್ನೊಂದು ಸೇರಿದ ಎರಡು ನದಿಗಳ ಪ್ರವಾಹ ಮತ್ತೆ ಎರಡು ಪಾತ್ರಗಳಲ್ಲಿ ಹರಿದದ್ದನ್ನು ಯಾರಾದರೂ ನೋಡಿದ್ದಾರೆಯೆ? ನಾನು ನಿನ್ನನ್ನು ಕ್ಷಮಿಸುವುದೆಂದರೆ ನನ್ನನ್ನು ನಾನೇ ಕ್ಷಮಿಸಿಕೊಂಡಂತೆ ! ನೀನು ನನ್ನ ಕ್ಷಮೆಯನ್ನು ಬೇಡುವುದೆಂದರೆ ನಾನೇ ನನ್ನ ಕ್ಷಮೆ ಬೇಡಿದಂತೆ!' ಇದನ್ನು ಕೇಳಿ ಆಕೆ ಮೆಲುನಗೆಯನ್ನು ತಡೆಯಲಾಗದೆ ತಾನಾಗಿಯೇ, ಮನೋರಾಜ್ಯಗಳನ್ನು ಕಟ್ಟುವ ಸಾಮರ್ಥ್ಯವನ್ನು ದೇವರು ಮನುಷ್ಯನಿಗೆ ಕೊಟ್ಟಿರದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!

ದೇವಯಾನಿ ಈಗ ಬರಬಹುದು, ಮತ್ತೆ ಬರಬಹುದು, ಆಕೆ ಬಂದಾಗ ನಡೆದು ಹೋದದ್ದನ್ನೆಲ್ಲ ಒಂದು ಕ್ಷಣದಲ್ಲಿ ಮರೆತುಬಿಡುಬಹುದು. ಆಕೆಗೆ ತಾನು ಹೇಳಬಹುದು. 'ನಿನ್ನ ಸಂಸ್ಕಾರಗಳು ತೀರ ಬೇರೆಯಾಗಿವೆ. ಅದು ನನಗೆ ತಿಳಿಯಬೇಕಾಗಿತ್ತು. ಆದರೆ ಲಕ್ಷ್ಯಕ್ಕೆ ಬರಲಿಲ್ಲ. ಅದಕ್ಕಾಗಿ ನೀನು ನನ್ನನ್ನು ಕ್ಷಮಿಸಬೇಕು. ಮಧ್ಯ ಸೇವಿಸಿದ ಯಯಾತಿ ಇನ್ನೆಂದಿಗೂ ಶಯನ ಮಂದಿರದಲ್ಲಿ ಕಾಣಿಸಿಕೊಲ್ಲುವುದಿಲ್ಲ. ಇಷ್ಟರಿಂದ ನಿನಗೆ ಸಮಾಧಾನವಾಗದಿದ್ದರೆ ನಿನ್ನಾಣೆಯನ್ನೇ ಇಟ್ಟುಕೊಂಡು ಈ ಕ್ಷಣದಲ್ಲಿಯೇ ಮಧ್ಯವನ್ನು ಸಂಪೂರ್ಣವಾಗಿ ಬಿಟ್ಟುಬಿಡುತ್ತೇನೆ. ಮತ್ತೆ ಎಂದೆಂದಿಗೂ ಯಾವ ಮಧ್ಯ ಪ್ರಕಾರವನ್ನೂ ಈ ತುಟಿಗಳು ಮುಟ್ಟುವುದಿಲ್ಲ!' ಆವಾಗ ಆಕೆ ತನ್ನ ಕೈಗಳನ್ನು ನನ್ನ ಕೊರಳ ಮಾಲೆಯನ್ನಾಗಿಸಿ 'ನನ್ನಂತೆ ನಿಮ್ಮ ಸಂಸ್ಕಾರಗಳೂ ಬೇರೆಯಾಗಿವೆ. ಅದನ್ನು ನಾನು ಗಮನಿಸಬೇಕಾಗಿದ್ದಿತು. ನೀವು ಕ್ಷತ್ರಿಯರು, ವೀರರು, ರಾಜರು, ನಿಮಗೆ ರಾಜ್ಯ ನಡೆಸಬೇಕಾಗುತ್ತದೆ, ಯುದ್ಧ ಮಾಡಬೇಕಾಗುತ್ತದೆ. ಮಧ್ಯ ಒದಗಿಸುವ ಉನ್ಮಾದ ನಿಮಗೆ ಅಗತ್ಯವಾಗಿರುತ್ತದೆ. ನಿಮ್ಮ ಈ ಸಾಮಾನ್ಯ ಸಂತೋಷಕ್ಕೆ ನಾನು ಅಡ್ಡ ಬರುವುದು ಸರಿಯಲ್ಲ. ಆದರೆ ನಾನಾದರೂ ಏನು ಮಾಡಲಿ? ಮಧ್ಯದ ವಾಸನೆಯನ್ನು ನನಗೆ ಎಷ್ಟು ಮಾತ್ರವೂ ಸಹಿಸುವುದಾಗುವುದಿಲ್ಲ! ಏಕಾಂತದಲ್ಲಿಯ ನಮ್ಮ ಭೇಟಿಯ ಸಮಯದಲ್ಲಿ ನೀವು ಮಧ್ಯವನ್ನು ಸೇವಿಸಿರಬಾರದು ಎಂಬುದಷ್ಟೇ ತಮ್ಮಲ್ಲಿ ನನ್ನ ಬೇಡಿಕೆ!' ಎಂದು ಹೇಳುತ್ತಾಳೆ''. ಮದುವೆಯಾದ ಮೊದಲ ದಿನವೇ ಮಧ್ಯ ಸೇವಿಸಿಕೊಂಡು ಹೋಗಿ, ತನ್ನ ಖಾಸಗಿ ಅಪೇಕ್ಷೆ ಈಡೇರದೆ, ಅದರಿಂದ ವಂಚಿತನಾದ ಯಯಾತಿಯು, ತನ್ನ ಹೆಂಡತಿಯಾದ ದೇವಯಾನಿಯು

ಈಗಲ್ಲ, ಇನ್ನೊಂದು ಕ್ಷಣದಲ್ಲಿ, ಇನ್ನೊಂದು ಕ್ಷಣದಲ್ಲಲ್ಲ ಮತ್ತೊಂದು ಕ್ಷಣದಲ್ಲಿ ಬಂದೇಬರುತ್ತಾಳೆ, ಯಾವುದೇ ಕಾರಣಕ್ಕೂ ಅವಳು ಬಾರದೇ ಇರುವುದಿಲ್ಲ ಎಂದು ತನ್ನೊಳಗೇ ಅಂದುಕೊಳ್ಳುತ್ತಾನೆ. ತನ್ನಿಂದಲೇ ತಾನು ಅತ್ಯಂತ ಇಕ್ಕಟ್ಟಿಗೆ ಸಿಕ್ಕಿಕೊಂಡಿರುವ ಯಯಾತಿಯ ಮಾನಸಿಕ ತಳಮಳವನ್ನು ಹಾಗೂ ಅದರ ವಿಚಿತ್ರವಾದ, ಸೂಕ್ಷ್ಮವಾದ ಒಳತೋಟಿಯನ್ನು ಈ ಭಾಗವು ಅತ್ಯಂತ ಪರಿಣಾಮಕಾರಿಯಾಗಿ ಬಿಚ್ಚಿಟ್ಟಿದೆ. ದೇವಯಾನಿ ನಿಜಕ್ಕೂ ಬರುತ್ತಾಳೊ ಇಲ್ಲವೊ ಗೊತ್ತಿಲ್ಲ. ಆದರೆ ಅವಳ ಬರುವಿಕೆಗೆ, ಹೊಸದಾಗಿ ಮದುವೆಯಾಗಿರುವ ಗಂಡಿನ ದೇಹ ಮತ್ತು ಮನಸ್ಸು ಪರದಾಡುವುದನ್ನು ಹಾಗೂ ಹಪಹಪಿಸುವುದನ್ನು ನಿರೂಪಿಸಿರುವ ಕ್ರಮ ಮಾತ್ರ ಅತ್ಯಂತ ಅಸಾಧಾರಣವಾದುದು.

ದೇವಯಾನಿಯು ಶರ್ಮಿಷ್ಠೆಯನ್ನು ನೆಲಮಾಳಿಗೆಯಲ್ಲಿ ಬಂಧಿಸಿಡುತ್ತಾಳೆ. ತಾನು ನೃತ್ಯ ಮಾಡಲು ಹೋಗುತ್ತಾಳೆ. ಶರ್ಮಿಷ್ಠೆಯನ್ನು ದೇವಯಾನಿ ಬಂಧಿಸಿಟ್ಟಿರುವುದು ದಾಸಿಯೊಬ್ಬಳಿಂದ ಯಯಾತಿಗೆ ತಿಳಿಯುತ್ತದೆ. ತಕ್ಷಣ ಶರ್ಮಿಷ್ಠೆಯನ್ನು ರಕ್ಷಿಸುವ ಯೋಚನೆ ಮಾಡುತ್ತಾನೆ. ನೃತ್ಯ ನಡೆಯುತ್ತಿರುವಾಗಲೆ, ಮಾಧವನಿಗೆ ಕುದುರೆ ಸಿದ್ಧಮಾಡುವಂತೆ ಸೂಚನೆ ಕೊಡುತ್ತಾನೆ. ನೃತ್ಯದ ನಡುವೆ ತಾನು ಎದ್ದು ಬರುತ್ತಾನೆ. ಯಾರ ಕಣ್ಣಿಗೂ ಬೀಳದ ಹಾಗೆ ಶರ್ಮಿಷ್ಠೆಯನ್ನು ಮಾಧವನ ಕುದುರೆಯ ಮೂಲಕ ಬಹಳ ದೂರಕ್ಕೆ ಕಳಿಸುತ್ತಾನೆ. ಶರ್ಮಿಷ್ಠೆಯನ್ನು ಕಳಿಸಿ ವಾಪಸ್ ಬರುವಾಗ ಮಳೆ ಬರುತ್ತಿತ್ತು. ಹಾಗಾಗಿ ಮಾಧವ ಅದರಲ್ಲಿ ನೆನೆದುಹೋದ. ಮಾತ್ರವಲ್ಲ; ಆಕೆಯನ್ನು ಬಿಟ್ಟು ಬರುವಾಗ ಶರ್ಮಿಷ್ಠೆಯ ಮಾತಿಗೆ ಆತನ ಕರುಳು ಚುರುಕ್ ಎನ್ನುತ್ತದೆ. ಈ ಎರಡೂ ಸೇರಿ ಅವನು ಜ್ವರದಿಂದ ಬಳಲಿ ಸಾವನ್ನಪ್ಪುತ್ತಾನೆ. ನಂತರ ಈ ಎರಡರ ಪರಿಣಾಮಗಳೂ ಒಟ್ಟಾಗಿ ಯಾಯತಿಯ ಮನಸ್ಸನ್ನು ಕೊಯ್ಯಲು, ಕೊರೆಯಲು ಶುರುಮಾಡುತ್ತವೆ. ಯಯಾತಿ ಮತ್ತೊಂದು ಸಲ ಊಹಿಸಲಾಗದ ಒತ್ತಡಕ್ಕೆ ಒಳಗಾಗುತ್ತಾನೆ. ಆಗ ತನಗೆ ತಾನೇ ಯಯಾತಿ ಹೀಗೆಂದುಕೊಳ್ಳುತ್ತಾನೆ.

'ದೇವಯಾನಿ ಬರಬೇಕು, ನನ್ನ ಹತ್ತಿರ ಕುಳಿತುಕೊಂಡು ಮಾಧವನ ನಿಧನದ ಬಗ್ಗೆ ವಿಷಾದದ ಮಾತುಗಳನ್ನು ಹೇಳಬೇಕು, ನಾನು ಆಕೆಯ ತೊಡೆಯಲ್ಲಿ ತಲೆಯನ್ನಿರಿಸಿ ಆತನ ಗುಣವರ್ಣನೆಯನ್ನು ಮಾಡಬೇಕು, ನಮ್ಮಿಬ್ಬರ ಕಣ್ಣೀರು ಒಟ್ಟಾಗಿ ಸೇರಿ ಹರಿಯಬೇಕು, ಆಗ ನಾನು ಆಕೆಯ ಬಾಹುಪಾಶದಲ್ಲಿ ನಿದ್ರೆಹೋಗುವಂತಾಗಬೇಕು. ಹೆದರಿಕೊಂಡ ಎಳೆ ಮಗು ತಾಯ ತೊಡೆಯಲ್ಲಿ ನಿರ್ಭೀತವಾಗಿ ನಿದ್ರೆ ಹೋಗುವಂತೆ ನಿದ್ರೆ ಹೋಗಬೇಕು'[3]. ಒಂದು ಕಡೆ ಅತ್ಯಂತ ಆತ್ಮೀಯ ಗೆಳೆಯನೊಬ್ಬನ ಗಂಡಾಂತರಕಾರಿಯಾದ ಸಾವು ಮತ್ತೊಂದು ಕಡೆ ಪ್ರೀತಿ

ಪ್ರೇಮವನ್ನು ನಿರೀಕ್ಷೆಗೂ ಮೀರಿ ಧಾರೆಯೆರೆಯಬೇಕಾಗಿದ್ದ ಹೆಂಡತಿ; ಈ ಎರಡೂ ತೀವ್ರತೆಗಳು ಒಂದೇ ಸಲ ಯಯಾತಿಯ ಮೇಲೆ ಬಂದೆರಗುತ್ತವೆ. ಅಂತಹ ಸಂದರ್ಭದಲ್ಲಿ ಯಯಾತಿಗೆ ಆದ ಮಾನಸಿಕ ತಲ್ಲಣವನ್ನು ಮತ್ತು ಅದರ ಭಾಗವಾಗಿ ಆತನ ಕನವರಿಕೆಯನ್ನು ಮೇಲಿನ ಉಲ್ಲೇಖಿತ ಸಾಲುಗಳು ನಮಗೆ ತಿಳಿಸುತ್ತವೆ. ಸ್ನೇಹಿತನ ಮರಣದ ಶೋಕವನ್ನು ಬಾಳ ಸಂಗಾತಿಯ ತೊಡೆಯ ಸ್ಪರ್ಶದ ಮೂಲಕ ಶಮನಗೊಳಿಸಿಕೊಳ್ಳಬಹುದು ಎಂಬ ಮಾನವೀಯ ಸಹಜವಾದ ತುಮುಲವನ್ನು ಅತ್ಯಂತ ಪರಿಣಾಮಕಾರಿಯಾಗಿ ಮೇಲಿನ ಉಲ್ಲೇಖವು ನಿರೂಪಿಸಿದೆ. ಒಂದು ಕಡೆ ಸ್ನೇಹಿತನ ಸಾವು ಮತ್ತೊಂದು ಕಡೆ ಬಾಳ ಸಂಗಾತಿಯ ಗೈರುಹಾಜರಿಯ ಮಾನಸಿಕ ಪರಿಣಾಮವನ್ನು ಮತ್ತೇಗೆ ವಿವರಿಸಲು ಸಾಧ್ಯ?

ದೇವಯಾನಿಯಿಂದ ಶರ್ಮಿಷ್ಠೆಗೆ ಆಗಬಹುದಾಗಿದ್ದ ಯಾವುದೇ ಬಗೆಯ ಅನಾಹುತವನ್ನು ತಪ್ಪಿಸುವ ಸಲುವಾಗಿ ಯಯಾತಿಯು, ಶರ್ಮಿಷ್ಠೆಯನ್ನು ಮಾಧವನ ಮೂಲಕ ನೆಲಮಾಳಿಗೆಯಿಂದ ಬಹಳ ದೂರಕ್ಕೆ ಕಳಿಸಿದ. ಯಯಾತಿಗೆ ಹೆಂಡತಿಯಾಗಿ, ಹಸ್ತಿನಾಪುರದ ಮಾಹಾರಾಜನಾದ ಯಯಾತಿಗೆ ಮಹಾರಾಣಿಯಾಗಿ ದೇವಯಾನಿಯು ಆತನಿಗೆ ಯಾವ ಸುಖವನ್ನು ಕೊಡಬಹುದಾಗಿತ್ತೊ ಆ ಯಾವುದೇ ಸುಖವನ್ನು ದೇವಯಾನಿ ಯಯಾತಿಗೆ ಕೊಡಲಿಲ್ಲ; ಅಥವಾ ಸ್ವತಃ ಯಯಾತಿಯೇ ದೇವಯಾನಿಯಿಂದ ಅದನ್ನು ಪಡೆಯಲಾಗಲಿಲ್ಲ. ಇಂತಹ ಸಂದರ್ಭದಲ್ಲಿ ಹಸ್ತಿನಾಪುರದ ಮಹಾರಾಣಿಯಲ್ಲದ, ಅದರ ಬದಲು ಆ ಮಹಾರಾಣಿಯ ದಾಸಿಯಾದ ಶರ್ಮಿಷ್ಠೆಯು ಯಯಾತಿಗೆ ಆ ಎಲ್ಲವನ್ನೂ ಕೊಟ್ಟಳು; ಅಥವಾ ಯಯಾತಿಯು ಶರ್ಮಿಷ್ಠೆಯಿಂದ ಆ ಎಲ್ಲವನ್ನೂ ಪಡೆದ. ಕೊನೆಗೊಮ್ಮೆ ತನ್ನ ಹೆಂಡತಿಯಿಂದ ಪಾರು ಮಾಡುವುದಕ್ಕಾಗಿಯೋ ಅಥವಾ ಹೆಂಡತಿಯಿಂದ ಪಾರುಮಾಡುವ ನೆಪದಲ್ಲೊ ಅದೇ ಶರ್ಮಿಷ್ಠೆಯನ್ನು ಅತ್ಯಂತ ನಿರ್ದಯವಾಗಿ ಕಾಡಿಗೆ ಕಳಿಸಿದ. ಅಂತಹ ಸಂದರ್ಭದಲ್ಲಿ ಶರ್ಮಿಷ್ಠೆಗೆ ಅಥವಾ ಶರ್ಮಿಷ್ಠೆಯ ಜಾಗದಲ್ಲಿರಬಹುದಾದ ಯಾವುದೇ ಹೆಣ್ಣಿಗೆ ಏನನಿಸಬಹುದು? ಕಾದಂಬರಿಯು ಅದನ್ನು ಹೀಗೆ ನಿರೂಪಿಸಿದೆ. ಶರ್ಮಿಷ್ಠೆಗೆ ಅನಿಸಿದ್ದು ಹೀಗೆ. 'ಶರ್ಮಿಷ್ಠೆ, ನನಗೆ ಈ ರಾಜ್ಯ ಬೇಡ, ಈ ವೈಭವ ಬೇಡ, ನನಗೆ ನೀನು ಮಾತ್ರ ಬೇಕು; ನಡೆ, ನಾನೂ ನಿನ್ನೊಡನೆ ಬಂದುಬಿಡುತ್ತೇನೆ. ಎಲ್ಲಿಯಾದರೂ ದೂರ ಹಿಮಾಲಯದಡಿಯಲ್ಲಿ ಸುಖವಾಗಿರೋಣ!'[೩] ಹೀಗೆಂದು ಯಯಾತಿ ಮನಸ್ಸಿನಲ್ಲಿ ಅಂದುಕೊಂಡು, ತನ್ನ ಜೊತೆ ಬರಬಹುದಿತ್ತು ಎಂಬುದಾಗಿ ಶರ್ಮಿಷ್ಠೆ ಯೋಚಿಸುತ್ತಾಳೆ. ಒಂದು ಪಾತ್ರದ ಮಾನಸಿಕ ಒಳತೋಟಿಯ ಮೂಲಕ ಮತ್ತೊಂದು ಪಾತ್ರದ ಒಳತೋಟಿಯನ್ನು ಅನಾವರಣ ಮಾಡುವ ಕಾದಂಬರಿಯ ನಿರೂಪಣಾ ವಿಧಾನದ

ಈ ತಂತ್ರವು ಅತ್ಯಂತ ಮನೋಜ್ಞಾವಾದುದು. ಕೇವಲ ಪಾತ್ರಗಳ ಬಹಿರಂಗ ಚಟುವಟಿಕೆಗಳನ್ನು ಮಾತ್ರವಲ್ಲದೆ, ಅವುಗಳ ಒಳತೋಟಿಯನ್ನು ಅತ್ಯಂತ ಸೂಕ್ಷ್ಮವಾಗಿ ತೆರೆದಿಡುವ ಈ ಕ್ರಮ ಮೆಚ್ಚುವಂತಹದ್ದು.

ಯಯಾತಿಯ ಮಗನಾದ ಯದುವನ್ನು ರಾಕ್ಷಸರು ಸೆರೆ ಹಿಡಿದುಕೊಂಡು ಹೋಗಿರುತ್ತಾರೆ. ಆ ಸಮಯದಲ್ಲಿ ಯಯಾತಿಯು ಅಶೋಕವನದಲ್ಲಿರುತ್ತಾನೆ. ದೇವಯಾನಿಯು ಅರಮನೆಯಲ್ಲಿರುತ್ತಾಳೆ. ಯದುವನ್ನು ಸೆರೆ ಹಿಡಿದ ಸುದ್ಧಿ ದೇವಯಾನಿಯ ಕಿವಿಗೆ ಬಿದ್ದಾಗ ಆತನನ್ನು ಬಿಡಿಸಿಕೊಂಡು ಬರುವವರು ಯಾರು ಎಂದು ಚಿಂತಿಸುತ್ತಾಳೆ. ಹಾಗೆ ನೋಡಿದರೆ ಹಸ್ತಿನಾಪುರದ ಮಹಾರಾಜನ ಮಹಾರಾಣಿಯಾದ ದೇವಯಾನಿ ಆ ರೀತಿ ಚಿಂತಿಸಬೇಕಾಗಿರಲಿಲ್ಲ. ಯಾಕೆಂದರೆ ಮೂರು ಲೋಕವನ್ನು ನಡುಗಿಸುವ ಶುಕ್ರಾಚಾರ್ಯರ ಮಗಳು. ಇಂದ್ರನನ್ನೇ ಸೋಲಿಸಿದ್ದ ನಹುಷ ಮಹಾರಾಜನ ಮುದ್ದಿನ ಸೊಸೆ. ಹಾಗಿದ್ದಾಗಲೂ ದೇವಯಾನಿಗೇಕೆ ಇಂತಹ ಸ್ಥಿತಿ? ಇದನ್ನೆಲ್ಲ ನೆನಸಿಕೊಂಡಾಗ ದೇವಯಾನಿಯ ಮನಸ್ಸಿನಲ್ಲಿ ನಡೆದುದಾದರೂ ಏನು? ಅವಳ ಮನಸ್ಸಿನಲ್ಲಾದ ಹೊಯ್ದಾಟವನ್ನು ಈ ಮುಂದಿನ ಸಾಲುಗಳು ನಿರೂಪಿಸುತ್ತವೆ. 'ಅನೇಕ ತೀವ್ರವಾದ ದುಃಖಗಳು ಕಳೆದ ಹದಿನೆಂಟು ವರ್ಷಗಳಿಂದ ನನ್ನ ಮನಸ್ಸಿನಲ್ಲಿ ಒಟ್ಟಾಗಿ ಕುಳಿತಿವೆ. ಜ್ವಾಲಾಮುಖಿಯ ಅಂತರಂಗದಲ್ಲಿಯ ಅಗ್ನಿರಸದಂತೆ ಅವು ಸ್ಫೋಟಕ್ಕಾಗಿ ಒಳಗೊಳಗೆಯೇ ಕುದಿಯುತ್ತಿವೆ. ನನ್ನನ್ನು ನೋಯಿಸಿದವರೆಲ್ಲರ ಮೇಲೂ ನಾನು ಸೇಡು ತೀರಿಸಿಕೊಳ್ಳುವವಳಿದ್ದೇನೆ. ಆ ಶರ್ಮಿಷ್ಠೆ, ಚಕ್ರವರ್ತಿಯಾಗಬೇಕೆಂದುಕೊಂಡಿದ್ದ ಆಕೆಯ ಆ ಪೋರ, ಈ ಯಯಾತಿ ಮಹಾರಾಜರು, ಎಲ್ಲರ ಮೇಲೆಯೂ ಸೇಡು ಸಾಧಿಸಬೇಕಾಗಿದೆ. ಆದರೆ ಅದು ಈಗಲ್ಲ! ತಂದೆಯವರು ತಪಸ್ಸನ್ನು ಮುಗಿಸಿಕೊಂಡು ಹಿಂದಿರುಗಿದ ನಂತರ! ಅದ್ಭುತ ಸಿದ್ಧಿ ಅವರಿಗೆ ಕೈವಶವಾದನಂತರ!'[೩].

ದೇವಯಾನಿಯಿಂದ ದೂರವಾದ ಒಂದು ಅತೃಪ್ತಿ, ಶರ್ಮಿಷ್ಠೆಯನ್ನು ಕಾಡಿಗೆ ಕಳಿಸಿದ ನೋವು, ಆತ್ಮೀಯ ಗೆಳೆಯ ಮಾಧವನನ್ನು ಕಳೆದುಕೊಂಡ ಶೋಕ ಈ ಮೂರೂ ಮುಪ್ಪುರಿಗೊಂಡು ಯಯಾತಿಯನ್ನು ಕಿತ್ತುತಿನ್ನುತ್ತಿದ್ದವು. ಸಾವನ್ನಪ್ಪಿದ ಮಾಧವನಂತೂ ಹುಟ್ಟಿಬರುವಂತಿರಲಿಲ್ಲ. ಅರಮನೆಯಿಂದ ಬಹಳ ದೂರ ಹೋಗಿದ್ದ ಶರ್ಮಿಷ್ಠೆಯ ಸಾಮೀಪ್ಯ ಸುಲಭದಲ್ಲಿ ಫಲಿಸುವಂತಿರಲಿಲ್ಲ. ಇಂತಹ ಇಕ್ಕಟ್ಟಿನಲ್ಲಿ ಹತ್ತಿರದಲ್ಲಿದ್ದ ದೇವಯಾನಿಯ ಸಾಮೀಪ್ಯವನ್ನೇ ಯಯಾತಿಯ ಒಳಮನಸ್ಸು ಬೇಡಿತು. ಆದರೆ ಈಗಿನ ಸ್ಥಿತಿಯಲ್ಲಿ ಯಯಾತಿ ಸಹಜವಾಗಿ ಇರಲಿಲ್ಲ. ದಿನನಿತ್ಯ ಅವನು ಮದ್ಯ ಸೇವನೆ ಮಾಡುತ್ತಿದ್ದ. ಹಾಗೆಯೇ ಒಂದು ಸಲ ಮಧ್ಯವನ್ನು

ಕುಡಿದು ಅರಮನೆಯನ್ನು ಪ್ರವೇಶ ಮಾಡಿದ. 'ಶರ್ಮಿಷ್ಠೆ ಎಲ್ಲಿದ್ದಾಳೆ? ನನ್ನ ಶರ್ಮಿಷ್ಠೆ ಎಲ್ಲಿದ್ದಾಳೆ? ರಾಕ್ಷಸಿ, ನೀನು ಆಕೆಯನ್ನು ಕೊಂದುಬಿಟ್ಟಿದ್ದೀಯ. ನಿನ್ನಂತಹ ದುಷ್ಟ ಹೆಂಗಸು ಪ್ರಪಂಚದಲ್ಲಿಯೇ ಇಲ್ಲ!' ಎಂದು ದೇವಯಾನಿಯ ಮೇಲೆ ಎಗರಿ ಬಂದ. ಆಗ ದೇವಯಾನಿಯು 'ನನ್ನನ್ನು ಎಂದಿಗೂ ಮುಟ್ಟುವುದಿಲ್ಲ ಎಂದು ಶಪಥ ಮಾಡಿ' ಎಂದಳು. ಅದರಿಂದ ಯಯಾತಿ ದೇವಯಾನಿಯ ಮಹಲಿನಿಂದ ಹೊರಟು ಹೋದ. ನಂತರ ಅವರಿಬ್ಬರ ನಡುವಿನ ಪತಿಪತ್ನಿ ಸಂಬಂಧ ಕಡಿದುಹೋಯಿತು, ಜೀವನದಲ್ಲಿಯ ಅತ್ಯಂತ ರಮ್ಯವಾದ, ನಯನಾಜೂಕಿನ ಹೊಂದಿಕೆಯ ಸಂಬಂಧ ಕಡಿದುಹೋಯಿತು. ಇದನ್ನೆಲ್ಲ ದೇವಯಾನಿ ತನಗೆ ತಾನೇ ಅದೆಷ್ಟೋ ಸಲ ಮರುನೆನಪಿಗೆ ತಂದುಕೊಂಡು ಯೋಚಿಸಿದ್ದಾಳೆ. ಇದರಲ್ಲಿ ತಪ್ಪು ತನ್ನದೊ, ಯಯಾತಿಯದೊ ಎಂದು ಆಲೋಚಿಸಿದ್ದಾಳೆ. ಅವಳು ಈ ಬಗ್ಗೆ ಒಂದು ಸಲ ತನ್ನ ಮನಸ್ಸಿನೊಳಗೆ ಪತಿಯಾದ ಯಯಾತಿಯನ್ನು ಕುರಿತಾಗಿ ಹೀಗಂದುಕೊಂಡಳು. 'ನೀನು ನಿನ್ನ ಧರ್ಮವನ್ನು ಆಚರಿಸಲಿಲ್ಲ. ನಿನ್ನ ಕರ್ತವ್ಯವನ್ನು ತಿಳಿದುಕೊಳ್ಳಲಿಲ್ಲ, ಪ್ರೀತಿ ಎನ್ನುವುದು ಹೊರಜಗತ್ತಿನಲ್ಲಿಯ ಸಂಗತಿಗಳನ್ನು ಅವಲಂಬಿಸಿರುತ್ತದೆಯೆ? ಒಂದು ಹೃದಯದಲ್ಲಿ ಉಗಮಹೊಂದಿ ಇನ್ನೊಂದು ಹೃದಯವನ್ನು ಸೇರುವ ಒಂದು ಮಹಾನದಿ ಅದು. ದಾರಿಯಲ್ಲಿ ಎಂತಹ ಎತ್ತರದ ಬೆಟ್ಟಗಳು ಬರಲಿ, ಅವನ್ನು ಬಳಸಿಕೊಂಡು ಅದು ಮುಂದೆ ಸಾಗುತ್ತದೆ. ಯಾವನಾದರೊಬ್ಬ ತನ್ನವ ಎಂದ ಕ್ಷಣದಲ್ಲಿ ಆತನ ಗುಣದೋಷಗಳ ಲೆಕ್ಕ ಮುಗಿದು ಹೋಗುತ್ತದೆ. ಹಿಂದೆ ಉಳಿಯುವುದು ನಿರಪೇಕ್ಷವಾದ ಪ್ರೀತಿ ಮಾತ್ರ! ತಡವರಿಸುತ್ತ, ಮುಗ್ಗರಿಸುತ್ತ, ಏಳುತ್ತ, ಬೀಳುತ್ತ ಭಕ್ತಿಯ ಶಿಖರದತ್ತ ಸಾಗುವ ಪ್ರಯತ್ನವನ್ನು ಮಾಡುವುದು ಪ್ರೀತಿ! ಈಶ್ವರನ ಪೂಜೆಯನ್ನು ಮಾಡುತ್ತಿರುವಾಗ ಆತ ನಮಗೆ ಏನು ಕೊಟ್ಟಿದ್ದಾನೆ, ಏನು ಕೊಡಲಿಲ್ಲ ಎನ್ನುವುದರ ಲೆಕ್ಕ ಮಾಡುತ್ತೇವೆಯೆ? ಪ್ರೀತಿ ಎನ್ನವುದು ಮಾನವನು ಮಾಡುವ ಮಾನವನ ಪೂಜೆ. ಆ ಪೂಜೆಯನ್ನು ನೀನು ಮುರಿದಿರುವಿ. ಸ್ತ್ರೀಧರ್ಮಕ್ಕೆ ಕಲಂಕವನ್ನು ತಂದಿರುವಿ, ನೀನೆಂದಿಗೂ ಸುಖಿಯಾಗಲಾರೆ!'[೫].

ರಾಕ್ಷಸರು ಸೆರೆ ಹಿಡಿದಿರುವ ಯದುವನ್ನು ಬಿಡಿಸುವವರು ಯಾರು ಎಂದು ದೇವಯಾನಿ ಯೋಚಿಸುತ್ತಿರುವಾಗಲೆ ಪತಿಯಾದ ಯಯಾತಿಯ ನೆನಪೂ ಬರುತ್ತದೆ. ಆದರೆ ಆ ನೆನಪು ಕೇವಲ ನನೆಪಾಗಿರದೆ ಅದು ಆತನ ಮೇಲಿನ ಕೋಪವನ್ನೂ ಹೊತ್ತುಕೊಂಡು ಬರುತ್ತಿದೆ. ದೇವಯಾನಿಯ ಒಳಮನಸ್ಸಿನ ಒಂದು ಚಿತ್ರಣ ಈ ಮುಂದಿನಂತಿದೆ.

'ಮಹಾರಾಜರು ಇಲ್ಲಿಗೆ ಧಾವಿಸಿ ಬರಬೇಕಾಗಿತ್ತು. ಯದುವನ್ನು ಬಿಡಿಸಿಕೊಂಡು ಬರುವುದಕ್ಕೆ ಅವರು ಹೊರಟು ನಿಂತಿದ್ದರೆ ಅವರಿಗೆ ನನ್ನ ಕಣ್ಣೀರಿನ ಆರತಿಯನ್ನೆತ್ತುತ್ತಿದ್ದೆ. ಆ ಕಣ್ಣ

ಹನಿಗಳನ್ನು ಬೆರಳಿನಿಂದ ಒರೆಸುತ್ತ ಅವರು 'ಹುಚ್ಚಿ ನೀನು! ಹದಿನೈದು ದಿನಗಳಲ್ಲಿ ಯದುವನ್ನು ನಿನ್ನೆದುರು ತಂದು ನಿಲ್ಲಿಸುತ್ತೇನೆ, ನೋಡುವಿಯಂತೆ!' ಎಂದು ಹೇಳಬಹುದಿತ್ತು. 'ಹುಚ್ಚಿ ನೀನು! ಎಂತಹ ಮಧುರವಾದ ಮಾತುಗಳು ಅವು! ಆ ಮಾತುಗಳನ್ನು ಕೇಳುವುದಕ್ಕಾಗಿ ಹೆಂಗಸು ಹುಟ್ಟಿಬರಬೇಕು, ಅಂತಹವನ್ನು ಕೇಳುತ್ತಿರುವಾಗಲೇ ಈ ಲೋಕವನ್ನು ಬೀಳ್ಕೊಡಬೇಕು. ಯಾರಾದರೂ ತನ್ನನ್ನು ಅಕ್ಕರೆಯಿಂದ ಹತ್ತಿರವಾಗಿಸಿಕೊಳ್ಳಬೇಕು. ಮೃದುಮಧುರವಾದ ಮಾತುಗಳಿಂದ ಧೈರ್ಯ ಹೇಳಬೇಕು. ಪ್ರೀತಿಯಿಂದ ತಲೆಯನ್ನು ಸವರಬೇಕು. ಅಂತಹ ಭಾವಪೂರ್ಣ ಸ್ಪರ್ಶದಿಂದ ಮನಸ್ಸಿನಲ್ಲಿಯ ಬೇಗೆ ಎಲ್ಲವೂ ನಂದಿಹೋಗಬೇಕು! ಒಂಟಿತನದ ಈ ದುಃಖ ಸದಾಕಾಲವೂ ನನ್ನ ಬೆನ್ನು ಬಿಡುವುದಿಲ್ಲವೆ? ಅಂತಹ ಸುಖ ನನಗೆಂದಿಗೂ ಸಿಕ್ಕಲಾರದೆ? ಕೊನೆಯವರೆಗೂ ನಾನು ಹಸಿದವಳಾಗಿಯೇ ಉಳಿಯುವವಳೆ?'೬.

ಯಯಾತಿಯು ಹಸ್ತಿನಾಪುರದ ಮಹಾರಾಜ ನಹುಷ ಮಹಾರಾಜನ ಮಗ. ಇವನ ಅಣ್ಣ ಯತಿಯು ಯತಿ ಧರ್ಮವನ್ನು ಸ್ವೀಕರಿಸಿದ. ಇವನನ್ನೂ ಯತಿ ಧರ್ಮಕ್ಕೆ ಆಹ್ವಾನಿಸಿದ. ಆದರೆ ಯಯಾತಿಗೆ ಯತಿಧರ್ಮಕ್ಕಿಂತ ರಾಜಧರ್ಮ ಮುಖ್ಯವೆನಿಸಿತು. ಆತ್ಮದ ಆನಂದಕ್ಕಿಂತ ದೇಹದ ಸುಖ ಮುಖ್ಯವೆನಿಸಿತು. ತಾನೇ ಮದುವೆಯಾದ ಹೆಣ್ಣು ದೇವಯಾನಿಯಿಂದ ಹೆಣ್ಣಿನ ಸುಖದ ತೃಪ್ತಿಯನ್ನು ಪಡೆಯಲಾಗಲಿಲ್ಲ. ದೇವಯಾನಿಯಿಂದ ದೂರವಾಗಿ ಅಶೋಕ ವನದಲ್ಲಿದ್ದಾಗ ಹಲವಾರು ಹೆಣ್ಣುಗಳೊಂದಿಗೆ ಆ ಸುಖವನ್ನು ಅನುಭವಿಸಿದ. ಆದರೆ ಅನುಭವಿಸಿದ್ದಷ್ಟೂ ಅದು ಅತೃಪ್ತಿಯನ್ನೆ ಸೃಷ್ಟಿಸಿತೇ ಹೊರತು; ತೃಪ್ತಿಯನ್ನೆಂದೂ ಸೃಷ್ಟಿಸಲಿಲ್ಲ. ಇದರಿಂದ ಯಯಾತಿ ಬೇಸತ್ತುಹೋದ. ಆತನ ವಯಸ್ಸು ಕಡಿಮೆಯಾಗುತ್ತಾ ಬಂತು. ಆದರೆ ಎಲ್ಲವನ್ನೂ ಭೋಗಿಸಬೇಕೆಂಬ ಆಸೆ ಮಾತ್ರ ಕ್ಷಣಕ್ಷಣಕ್ಕೂ ಹಿಮಾಲಯದಷ್ಟು ಎತ್ತರಕ್ಕೆ ಬೆಳೆಯುತ್ತಾ ಹೋಯಿತು. ತನ್ನ ದೇಹ ಸುಖವನ್ನು ಇಂಗಿಸಿಕೊಳ್ಳಲು ಹೋಗಿಯೇ ಶುಕ್ರಾಚಾರಿಯಿಂದ ಶಾಪವನ್ನು ಪಡೆದ. ಕೊನೆಗೆ ದೇವಯಾನಿಯ ವಿನಂತಿಯ ಫಲವಾಗಿ ಅದಕ್ಕೆ ವಿಶಾಪವನ್ನೂ ಪಡೆದ. ಅದರ ಪ್ರಕಾರ (ತನ್ನ) ಶರ್ಮಿಷ್ಠೆಯ ಮಗನಾದ ಪುರುವಿನಿಂದ ಯೌವನವನ್ನು ಪಡೆದ. ಆ ಯೌವನವನ್ನು ಪಡೆಯುವ ಮೊದಲು ಯಯಾತಿಯ ಮಾನಸಿಕ ಒಳತೋಟಿಯನ್ನು ಮುಂದಿನ ಸಾಲುಗಳು ಪ್ರಸ್ತುತಪಡಿಸುತ್ತವೆ. 'ಹುಚ್ಚಾ, ಇದು ಹಸ್ತಿನಾಪುರದಲ್ಲಿಯ ಅಶೋಕವನ, ಸಾಮ್ರಾಟ ಯಯಾತಿ ನಾನು. ಬೇರೆ ಯಾವನೋ ಒಬ್ಬ ವಯಸ್ಸಾದ ರಾಜನನ್ನು ಹುಡುಕಿಕೊಂಡು ಹೊರಟವ ನನ್ನ ಕಡೆಗೆ ತಪ್ಪಿ ಬಂದಹಾಗಿದೆ. ಹೋಗು. ಹೊರಟು ಹೋಗು. ನನ್ನ ಜೀವನದ ಸಂಧ್ಯಾಕಾಲ ಇಷ್ಟು ಬೇಗ ಹೇಗೆ ಬಂದೀತು? ನನ್ನ ಯೌವನ ಇನ್ನು ಅತೃಪ್ತವಾಗಿಯೇ ಇದೆ, ನನ್ನ ಕಣ್ಣು,

ಕಿವಿ, ತುಟಿ, ಕೈ ಕಾಲುಗಳೆಲ್ಲವೂ, ನನ್ನ ದೇಹದ ಒಂದೊಂದು ಕಣವೂ, ಮೊದಲಿನಂತೆಯೇ ಸುಖಕ್ಕಾಗಿ ಹಸಿದೇ ಉಳಿದಿದೆ. ಪ್ರತಿ ರಾತ್ರಿಗಾಗಿಯೂ ನಾನು ಆತುರದಿಂದ ಕಾಯುತ್ತಿದ್ದೇನೆ. ಹೋಗು, ದೇವದೂತನೆ, ಹೋಗು ಮೃತ್ಯುಶಯ್ಯೆಯಲ್ಲಿದ್ದ ಆ ವೃದ್ಧ, ಗಲಿತಗಾತ್ರನಾದ ರಾಜನ ಹೆಸರನ್ನು ಸರಿಯಾಗಿ ಜ್ಞಾಪಿಸಿಕೋ. ಅವನ ಹತ್ತಿರ ಹೋಗಿ ನಿನ್ನ ಸಂದೇಶವನ್ನು ಹೇಳು'.[೭]

**ಕೊನೆ ಟಿಪ್ಪಣಿಗಳು**

೧. ಯಯಾತಿ, ಪುಟ ೧೭೬

೨. ಅದೇ, ಪುಟ ೨೯೬

೩. ಅದೇ, ಪುಟ ೩೦೪

೪. ಅದೇ, ೩೩೧

೫. ಅದೇ, ಪುಟ ೩೩೯

೬. ಅದೇ, ಪುಟ ೩೪೨

೭. ಅದೇ, ೩೫೨

ಅಧ್ಯಾಯ ಏಳು

# ಸಮಾರೋಪ

ಯಯಾತಿ ಕೃತಿಯನ್ನು ಸಾಮಾನ್ಯವಾಗಿ ಕಾದಂಬರಿಯೆಂದೇ ಕರೆಯಲಾಗಿದೆ. ಆದರೆ ಅದರೊಳಗೆ ಸಾಹಿತ್ಯದ ಹಲವು ಪ್ರಕಾರಗಳು ಮಿಳಿತಗೊಂಡಿರುವಂತೆ ಭಾಸವಾಗುತ್ತದೆ. ಕಾದಂಬರಿಯ ಪ್ರತಿಯೊಂದು ಪಾತ್ರಗಳೂ ತಮ್ಮ ಕಥೆಯನ್ನು ತಾವೇ ಹೇಳಿಕೊಳ್ಳುತ್ತವೆ. ಜೊತೆಗೆ ತಮ್ಮ ಮೂಲಕ ಇತರೆ ಪಾತ್ರಗಳ ವಿವರಗಳನ್ನು ನಿರೂಪಿಸುತ್ತವೆ. ಇದರಲ್ಲಿ ಪ್ರತಿಯೊಂದೂ ಕೂಡ ನಡೆದುಹೋದ ಘಟನೆಗಳನ್ನು ಆಧರಿಸಿದ್ದು. ಈ ಆಯಾಮದಲ್ಲಿ ಯಯಾತಿ ಕಾದಂಬರಿಯನ್ನು ವಿವಿಧ ಆತ್ಮಕಥೆಗಳ ಸಂಕಲನ ಎಂದೂ ಕರೆಯಬಹುದೆಂದು ಕಾಣುತ್ತದೆ. ಇದು ಒಂದು ಸಾಧ್ಯತೆ.

ಇನ್ನು ಕಾದಂಬರಿಯ ಅತ್ಯಂತ ಶಕ್ತಿಶಾಲಿಯಾದ ನಿರೂಪಣೆಯು ಅದನ್ನೊಂದು ನಾಟಕ ಪ್ರಕಾರ ಎಂದು ಭಾವಿಸುವಂತೆ ಮಾಡಿದೆ. ಕಾದಂಬರಿಯ ಅದೆಷ್ಟೋ ಭಾಗಗಳು, ಸನ್ನಿವೇಶಗಳು ನಮ್ಮ ಕಣ್ಣಿಗೆ ಕಟ್ಟುವಂತಿವೆ. ಅದು ಪಡೆಯುವ ನಾಟಕೀಯ ಆಯಾಮವು ಅತ್ಯಂತ ಪರಿಣಾಮಕಾರಿಯಾಗಿದೆ.

ಎರಡನೇ ಸಾಮ್ರಾಜ್ಯಶಾಹಿ ಯುದ್ಧ ಮುಗಿದ ನಂತರದ ಕಾಲಾವಧಿಯಲ್ಲಿ ಖಾಂಡೇಕರ್ ಅವರು ಇದನ್ನು ಬರೆದಿದ್ದಾರೆ. ಆದರೆ ಅವರ ಮನಸ್ಸಿನಲ್ಲಿ ಯಯಾತಿಯ ಪಾತ್ರವು ಅದಕ್ಕಿಂತಲೂ ಮೊದಲೇ ಇತ್ತು ಎಂಬುದನ್ನು ಸ್ವತಃ ಅವರೇ ಹೇಳಿಕೊಂಡಿದ್ದಾರೆ. ಈ ಕಾದಂಬರಿಯು ಖಾಂಡೇಕರರಿಂದ ರೂಪುಗೊಳ್ಳುತ್ತಿದ್ದಾಗ, ಇಡೀ ಪ್ರಪಂಚದ ಸಾಹಿತ್ಯ ವಲಯದಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿ ಕ್ರಿಯಾಶೀಲವಾಗಿತ್ತು. ವಾಸ್ತವವಾದವನ್ನು ಅತ್ಯಂತ ಸರಳವಾದ ಹಾಗೂ ಮನಮುಟ್ಟುವಂತಹ ರೀತಿಯಲ್ಲಿ ಬರೆಯಬೇಕು ಎಂದು ಬರಹಗಾರರು ಘೋಷಿಸಿಕೊಂಡಿದ್ದ ಕಾಲವಾಗಿತ್ತು. ಅಂತಹ ಸಂದರ್ಭದಲ್ಲಿ ಖಾಂಡೇಕರ್ ಅವರು, ವಾಸ್ತವವಾದಕ್ಕೆ ನೇರವಾಗಿ

ಸಂಬಂಧಪಡದ ಮಹಾಭಾರತದ ಆಖ್ಯಾನವೊಂದನ್ನು ಆಧಾರವಾಗಿಟ್ಟುಕೊಂಡು, ಪುರಾಣದಿಂದ ವರ್ತಮಾನಕ್ಕೂ; ವರ್ತಮಾನದಿಂದ ಪುರಾಣಕ್ಕೂ ಹೊಯ್ದಾಡುವ ಕಲಾಕೃತಿಯೊಂದನ್ನು ಹೆಣೆದಿರುವುದು ಅವರ ಲೋಕದೃಷ್ಟಿಯನ್ನೂ, ಕಲಾ ನಿರ್ಮಾಣದ ಅಂತರಂಗವನ್ನೂ ಒಟ್ಟೊಟ್ಟಿಗೇ ನಮಗೆ ತೆರೆದುತೋರಿಸುತ್ತದೆ. ಇಂದು ಪ್ರಗತಿಶೀಲ ಪಂಥದ ಎಷ್ಟೋ ಕಾದಂಬರಿಗಳು ನಮ್ಮ ಗಮನವನ್ನು ಸೆಳೆಯುತ್ತಿಲ್ಲ. ಆದರೆ ಯಯಾತಿಯಂತಹ ಕಾದಂಬರಿಯು ಇವತ್ತಿಗೂ ನಮ್ಮ ಆಸಕ್ತಿಯನ್ನು ಕೆರಳಿಸುತ್ತಿದೆ; ಮತ್ತು ಆಕರ್ಷಿಸುತ್ತಿದೆ. ಇದಕ್ಕೆ ಹಲವು ಕಾರಣಗಳಿವೆ.

ಕಾದಂಬರಿಯ ರಚನೆಯ ಕಾಲವು ಚಾರಿತ್ರಿಕವಾಗಿ ವಸಾಹತುಶಾಹಿಯ ಕೊನೆಯ ವರ್ಷಗಳು ಎನ್ನಬಹುದು. ಈಗ ನಾವಿರುವ ಕಾಲಘಟ್ಟವು ಸಾಮ್ರಾಜ್ಯಶಾಹಿಯ ನವವಸಾಹತು ಕಾಲಘಟ್ಟ. ಸಾಮ್ರಾಜ್ಯಶಾಹಿಯ ಮಾರುಕಟ್ಟೆಯು ಇಡೀ ಪ್ರಪಂಚದ ಬದುಕನ್ನು ಪ್ರಭಾವಿಸುತ್ತಿದೆ; ನಿಯಂತ್ರಿಸುತ್ತದೆ ಹಾಗೂ ತನ್ನ ಹಿತಾಸಕ್ತಿ ಮತ್ತು ಉದ್ದೇಶಗಳಿಗೆ ಅನುಗುಣವಾಗಿ ರೂಪಿಸಿಕೊಳ್ಳುತ್ತಿದೆ. ಸಾಮ್ರಾಜ್ಯಶಾಹಿಯ ಮಾರುಕಟ್ಟೆಯು ತನಗೆ ಬೇಕಾದ ಸರಕುಗಳನ್ನು ಉತ್ಪಾದನೆ ಮಾಡುತ್ತಿದೆ. ಅವನ್ನು ಮಾರಾಟ ಮಾಡುತ್ತಿದೆ. ಅವನ್ನು ಕೊಳ್ಳುವಂತೆ ಗ್ರಾಹಕರನ್ನು ಒತ್ತಾಯ ಮಾಡುತ್ತಿದೆ. ಅತ್ಯಂತ ಬಲಾತ್ಕಾರದಿಂದ, ಅತ್ಯಂತ ನಯವಂಚನೆಯ ವಿಧಾನಗಳ ಮೂಲಕ ಸಮಾಜದಲ್ಲಿ ಗ್ರಾಹಕತನವನ್ನು ನಿರ್ಮಾಣ ಮಾಡಿದೆ. ಆಧುನಿಕತೆ ಎಂದರೆ, ಆಧುನಿಕ ಬದುಕು ಎಂದರೆ ಮಾರುಕಟ್ಟೆಯ ಉತ್ಪಾದನೆಗಳಿಗೆ ಗುಲಾಮರಾಗಿರುವುದು ಎಂಬ ಸಾಮಾಜಿಕ ಪ್ರಜ್ಞೆಯನ್ನು ಅದು ನಿರ್ಮಾಣ ಮಾಡಿದೆ. ಇದರಿಂದ ತಪ್ಪಿಸಿಕೊಳ್ಳಲಾರದಂತಹ ಒತ್ತಾಯದ ಹಾಗೂ ಬಿಕ್ಕಟ್ಟಿನ ಪರಿಸ್ಥಿತಿಯನ್ನು ಬಲಾತ್ಕಾರವಾಗಿಯೇ ನಿರ್ಮಾಣ ಮಾಡಿದೆ. ಮಾರುಕಟ್ಟೆಯ ಉತ್ಪಾದಿತ ವಸ್ತುಗಳು ಮಾರಾಟವಾಗಬೇಕಾದರೆ, ಗ್ರಾಹಕರ ಪ್ರಮಾಣ ಜಾಸ್ತಿಯಾಗಬೇಕು. ಅವರಲ್ಲಿ ಕೊಂಡುಕೊಳ್ಳುವ ಪ್ರಜ್ಞೆ ನಿರ್ಮಾಣ ಆಗಬೇಕು. ಪ್ರತಿಯೊಂದಕ್ಕೂ ಮಾರುಕಟ್ಟೆಯನ್ನೆ ಅವಲಂಬಿಸುವಂತಹ ವಾತಾವರಣ ನಿರ್ಮಾಣವಾಗಬೇಕು. ಜೊತೆಗೆ ಮಾರುಕಟ್ಟೆಯ ಭೌತಿಕ ಪದಾರ್ಥಗಳನ್ನು ಬಳಸುವ ಮೂಲಕ ದೈಹಿಕ ಸುಖವನ್ನು ಪಡೆಯಬೇಕು ಎಂಬ ಪ್ರಶ್ನಾತೀತ ಸ್ವಭಾವವನ್ನು ಅತ್ಯಂತ ಗಟ್ಟಿಯಾಗಿ ನಿರ್ಮಾಣ ಮಾಡಿದೆ. ಅಂದರೆ ಭೌತಿಕ ವಸ್ತುಗಳನ್ನು ನಮ್ಮ ಅಗತ್ಯಗಳಿಗಿಂತಲೂ ಹೆಚ್ಚಾಗಿ ದೈಹಿಕ ಸುಖಕ್ಕಾಗಿ ಬಳಸಬೇಕು ಎಂಬ ಹಂಬಲ ಗಟ್ಟಿಯಾಗಿ ಮನೆ ಮಾಡಿದೆ. ಇದರ ಅತಿರೇಕದ ದಿನಗಳಲ್ಲಿಯೇ ನಾವಿದ್ದೇವೆ. ದೈಹಿಕ ಹಾಗೂ ಭೌತಿಕ ಸುಖ ಪಡೆಯಲು ನಾನಾ ಮಾರ್ಗಗಳನ್ನು ನಿರ್ಮಾಣ ಮಾಡಲಾಗಿದೆ. ಅವೆಲ್ಲ ನ್ಯಾಯೋಚಿತವೊ ಅಲ್ಲವೊ ಎಂಬುದು ಮುಖ್ಯವಲ್ಲ; ಅಂತೂ ಮಾನವರ ಬದುಕು ಆ ದಿಕ್ಕಿನೆಡೆ ಸಾಗುತ್ತಿದೆ.

ಇಂತಹ ಸಂದರ್ಭದಲ್ಲಿ ಯಯಾತಿ ಕಾದಂಬರಿಯು ದೈಹಿಕ ಸುಖ ಮುಖ್ಯವೊ ಅಥವಾ ಮಾನಸಿಕ ಆನಂದ ಮುಖ್ಯವೊ ಎಂಬ ಮೂಲಭೂತವಾದ ಪ್ರಶ್ನೆಯನ್ನು ಎತ್ತಿದೆ.

ಮೇಲಿನ ಚರ್ಚೆಯ ಹಿನ್ನೆಲೆಯಲ್ಲಿ ಯಯಾತಿ ಕಾದಂಬರಿಯ ಕೊನೆಯ ಪುಟಗಳಲ್ಲಿರುವ ವಿ.ಎಸ್. ಖಾಂಡೇಕರ್ ಅವರ ಮಾತುಗಳನ್ನು ಇಲ್ಲಿ ಉಲ್ಲೇಖಿಸಬೇಕು. 'ಯಯಾತಿಯಂತೆ ಉಪಭೋಗ, ಮತ್ತಷ್ಟು ಉಪಭೋಗದ ದಾರಿಯಲ್ಲಿ ನಡೆದು ಮನುಷ್ಯ ಸುಖಿಯಾಗಿರಲಾರ ಎನ್ನುವುದು ಸ್ಪಷ್ಟ. ಆದರೆ ಇದರರ್ಥ ಪ್ರತಿಯೊಬ್ಬನೂ ವೈರಾಗ್ಯವನ್ನು ಅಂಗೀಕರಿಸಬೇಕು, ಬ್ರಹ್ಮಚಾರಿಯಾಗಿ ಬಾಳಬೇಕು, ಸನ್ಯಾಸಿಯಾಗಬೇಕು, ಇಂತಹದ್ದನ್ನು ತಿನ್ನಬಾರದು, ಅಂತಹದ್ದನ್ನು ಕುಡಿಯಬಾರದು, ಎಂದು ಅಲ್ಲವೇ ಅಲ್ಲ. ಸಾಮಾನ್ಯ ಮನುಷ್ಯನ ಜೀವನದಲ್ಲಿ ಶಾರೀರಿಕ ಸುಖಕ್ಕೆ ಬಹಳ ದೊಡ್ಡದಾದ ಸ್ಥಾನವಿದೆ. ಆತನಿಗೂ ಹೊಟ್ಟೆ ತುಂಬ ರೊಟ್ಟಿ ಸಿಕ್ಕಬೇಕು, ಮೈ ತುಂಬ ಬಟ್ಟೆ ಸಿಕ್ಕಬೇಕು, ಇರುವುದಕ್ಕೆ ಚಿಕ್ಕದಾದರೂ ಚೊಕ್ಕದಾದ ಒಂದು ಜಾಗ ಇರಬೇಕು. ಅಗತ್ಯ ಬೇರೆ, ಅನಗತ್ಯ ವಿಲಾಸ ಬೇರೆ. ಪ್ರತಿಯೊಂದು ಶಾರೀರಿಕ ಅಗತ್ಯವೂ ಜೀವನಕ್ಕೆ ಆಧಾರ. ಪ್ರತಿಯೊಬ್ಬನ ಅಂತಹ ಅಗತ್ಯಗಳನ್ನು ಪೂರೈಸಲೇಬೇಕು. ಪ್ರತಿಯೊಬ್ಬನ ಮನೆಯಲ್ಲಿಯೂ ಒಂದು ದೀಪವಿರಲೇಬೇಕಾಗಿದ್ದ ಹಾಗೆ, ಇದಾದರೂ. ಆದರೆ ಕೇವಲ ಪ್ರದರ್ಶನಕ್ಕಾಗಿ, ಕೇವಲ ಥಳುಕಿಗಾಗಿ, ಸಾವಿರ ದೀಪಗಳನ್ನು ಉರಿಸಬಾರದು. ಅಂತಹದ್ದರ ಲೋಭಕ್ಕೆ ಒಳಗಾಗಬಾರದು. ಲೋಭದಲ್ಲಿ ಪಾಪ ಹುಟ್ಟಿಕೊಳ್ಳುತ್ತದೆ. ಲೋಭ, ಹಿಂಸೆ, ಅಪರಾಧ, ಪಾಪ ಇವೆಲ್ಲವೂ ಕ್ರಮವಾಗಿ ಒಂದರ ಮುಂದಿನ ಮೆಟ್ಟಿಲುಗಳಾಗಿವೆ. ಅಭ್ಯಾಸಬಲ ಪಾಪಿಯಾದವನನ್ನು ಮಹಾಪಾತಕಕ್ಕೆಳೆಯುತ್ತದೆ. ಮಹಾಪಾತಕ ಮನುಷ್ಯನನ್ನು ಅಮಾನುಷನನನಾಗಿ ಮಾಡಿಬಿಡುತ್ತದೆ.

'ಈ ಕಾದಂಬರಿ ಯಯಾತಿಯ ಕಾಮದ ಕಥೆಯಾಗಿದೆ, ದೇವಯಾನಿಯ ಸಂಸಾರದ ಕಥೆಯಾಗಿದೆ, ಶರ್ಮಿಷ್ಠೆಯ ಪ್ರೀತಿಯ ಕಥೆಯಾಗಿದೆ ಮತ್ತು ಕಚನ ಭಕ್ತಿಯ ಪ್ರಗಾಥವಾಗಿದೆ ಎನ್ನುವುದನ್ನು ಗಮನದಲ್ಲಿರಿಸಿಕೊಂಡು ವಾಚಕರು ಓದಿದರೆ ನನಗೆ ಸಂತೋಷವಾದೀತು. ಕಲಾತ್ಮಕ ರಂಜನೆಯೆಂದು. ಭಾವನೆಗಳ ಆಹ್ವಾನವೆಂದು ಸಾಮಾಜಿಕ ಬೋಧನೆಯೆಂದು ಸೂಕ್ಷ್ಮ ಅಥವಾ ವಿಶಾಲವಾದ ಜೀವನ ದರ್ಶನವೆಂದು ಒಂದರ ಮೇಲಿನ ಒಂದು ನೆಲೆಯಲ್ಲಿ ಒಳ್ಳೆಯ ಕಲಾಕೃತಿ ಏಕಕಾಲಕ್ಕೆ ಪರಿಣಾಮ ಬೀರಬಲ್ಲದು. ಇವುಗಳಲ್ಲಿ ಯಾವ ನೆಲೆಯನ್ನು ನಾನು ತಲುಪಿದ್ದೇನೆ. ಯಾವುದನ್ನು ತಲುಪಲು ಅಸಮರ್ಥನಾಗಿದ್ದೇನೆ ಎನ್ನುವುದನ್ನು ರಸಿಕರು ಹೇಳಬಲ್ಲರು.

ವಸಾಹತುಶಾಹಿಯ ಕೊನೇ ಘಟ್ಟದಲ್ಲಿ ರಚನೆಯಾದ ಕಾದಂಬರಿಯನ್ನು ನವವಸಾಹತುಶಾಹಿಯ ಮಾರುಕಟ್ಟೆಯ ಪ್ರಧಾನ ದಿನಗಳಲ್ಲಿ ಓದುವುದು, ಆ ಮೂಲಕ ಮಾನವರೊಳಗಿನ ಮಾನದ ಸೂಕ್ಷ್ಮಗಳನ್ನು ಅರಿಯುವುದು ಬಹಳ ಕುತೂಹಲಕರವಾದ ಹಾಗೂ ಸ್ವಾರಸ್ಯಕರವಾದ ಬೌದ್ಧಿಕ ಕೆಲಸ. ಕಾದಂಬರಿಯ ಪ್ರತಿಯೊಂದು ಪುಟಗಳೂ ಈ ಕಾದಂಬರಿಯನ್ನು ಹೇಗೆ ಓದಬೇಕು, ಹೇಗೆ ಅರ್ಥಮಾಡಿಕೊಳ್ಳಬೇಕು, ಯಾವ ಪಾತ್ರದ ಅಂತರಂಗವನ್ನು ಹೇಗೆ ಅರಿತುಕೊಳ್ಳಬೇಕು ಎಂಬಂತೆ ನಿರೂಪಿಸುತ್ತಿದೆ. ಬಹುಶಃ ಕಾದಂಬರಿಯ ಮೂಲ ಆಶಯ ಹಾಗೂ ಅದರ ಅತ್ಯಂತ ದೂರದೃಷ್ಟಿಯ ವಿಶಾಲವೂ, ಸಂಕೀರ್ಣವೂ ಆದ ಪರಿಣಾಮ ಅದಷ್ಟೇ ಆಗಿದ್ದರೆ ಈ ಕಾದಂಬರಿ ಪುರಾತನ ವಸ್ತು ಎಂಬ ಉಪೇಕ್ಷೆಗೋ, ನಿರಾಕರಣೆಗೋ ಖಂಡಿತಾ ಒಳಗಾಗುತ್ತಿತ್ತು. ಆದರೆ ಪುರಾಣದ ವಸ್ತು ವಿವೇಚನೆಯ ಮೂಲಕ ವರ್ತಮಾನದ ಸುಡುವಾಸ್ತವಗಳ ಹಲವು ಮುಖಗಳ ಸಂಕೀರ್ಣಗಳನ್ನು, ಸೂಕ್ಷ್ಮಗಳನ್ನು ತೆರೆದುತೋರಿಸುವ ಇದರ ಸೃಜನಶೀಲತೆಯ ಶಕ್ತಿ ಅಸಮಾನ್ಯವಾದುದು; ಅಸಾಧಾರಣವಾದುದು. ಈ ಕಾದಂಬರಿಯ ಮೂಲಕ ನಮ್ಮ ಕಾಲದ ಸಾಮಾಜಿಕ, ಸಾಂಸ್ಕೃತಿಕ ಜೀವನದ ಹಲವು ಸೂಕ್ಷ್ಮ ಕೋನಗಳು ನಮಗೆ ಬೇರೊಂದು ಬಗೆಯಲ್ಲಿ ಕಾಣುತ್ತವೆ ಎಂಬುದೇ ಯಯಾತಿ ಕಾದಂಬರಿಯ ಹೆಗ್ಗಳಿಕೆ.

## ಗ್ರಂಥಸೂಚಿ


ಖಾಂಡೇಕರ್.ವಿ.ಎಸ್. ೨೦೦೦, ಯಯಾತಿ, ಅಂಕಿತ ಪುಸ್ತಕ, ೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್ ಮುಖ್ಯ ರಸ್ತೆ, ಗಾಂಧಿ ಬಜಾರ್, ಬೆಂಗಳೂರು ೫೬೦ ೦೦೪

ನಾಯಕ ಹಾ.ಮಾ. (ಸಂ), ೧೯೮೪, ಕಾದಂಬರಿ ಲೋಕ, ವಿ.ಎಂ. ಇನಾಂದಾರ್ ನೆನಪಿನ ಸಂಪುಟ, ಗೀತಾ ಬುಕ್ ಹೌಸ್, ಮೈಸೂರು.

ರಾಜಾಗೋಪಾಲಾಚಾರಿ (ಸಂ), ೧೯೯೦, ನವನೀತ, ಗೀತಾ ಬುಕ್ ಹೌಸ್, ಮೈಸೂರು.

